## ‘ಸಿದ್ಧಗಂಗಾ’ ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವಸದಸ್ಯರ ಬಳಗಕ್ಕೆ ಕೃತಜ್ಞತೆಗಳು

971 ಶ್ರೀ ವೈ. ಕೆ. ರುದ್ರಯ್ಯ
ಗಾಂಧಿನಗರ
ಬೆಂಗಳೂರು-1.

972 ಶ್ರೀ ಪಿ. ಶಿವಲಿಂಗಮೂರ್ತಿ
S/o ಶ್ರೀ ಪುಟ್ಟಸ್ವಾಮಿ
ಗ್ರಾಮಸೇವಕ, ರಂಗೇನಹಳ್ಳಿ
ತರೀಕೆರೆ ತಾಲ್ಲೂಕ್
ಚಿಕ್ಕಮಗಳೂರು ಜಿಲ್ಲೆ.

973 ಶ್ರೀ ವಿ. ಕೃಷ್ಣಮೂರ್ತಿ
ಶ್ರೀನಿವಾಸ ಸ್ಟೋರ್ಸ್
ಮಲ್ಲೇಶ್ವರಂ
ಬೆಂಗಳೂರು-3.

974 ಶ್ರೀಮತಿ ಮತ್ತು ಶ್ರೀ
ಎಂ. ವಿ. ನಾಗರಾಜಶೆಟ್ಟಿ
ಮರ್ಚೆಂಟ್, ಟಿ. ನರಸೀಪುರ
ಮೈಸೂರು ಜಿಲ್ಲೆ.

975 ಶ್ರೀಮತಿ ಮತ್ತು ಶ್ರೀ
ಡಿ. ರಾಧಾಕೃಷ್ಣಶೆಟ್ಟಿ
ಶ್ರೀರಾಂಪೇಟೆ
ಮೈಸೂರು-1.

976 ಶ್ರೀ ಎಂ.ಜಿ. ರಾಜಶೇಖರಯ್ಯ
ಯಶವಂತಪುರ
ಬೆಂಗಳೂರು-22.

977 ಶ್ರೀ ವೈ. ಹೆಚ್. ಹಾಲಪ್ಪ
ರಾಜಾಜಿನಗರ
ಬೆಂಗಳೂರು-10.

978 ಶ್ರೀ ಕೆ. ಎನ್. ಕಾಂತರಾಜ್
ಆರ್.ಪಿ.ಸಿ. ಲೇಔಟ್
ವಿಜಯನಗರ
ಬೆಂಗಳೂರು-40.

979 ಶ್ರೀ ಎಂ. ಜಿ. ನರಸಿಂಹಯ್ಯ
ರಾಜಾಜಿನಗರ
ಬೆಂಗಳೂರು-10.

980 ಶ್ರೀ ಎನ್. ಪುಟ್ಟಪ್ಪ
ರಾಜಾಜಿನಗರ
ಬೆಂಗಳೂರು-10.

(ಮುಂದುವರಿಯುತ್ತದೆ)

# ಸಿದ್ಧಗಂಗಾ

ಸಂಪುಟ-೧೯ ಸಂಚಿಕೆ-೪ ಏಪ್ರಿಲ್, ೧೯೮೪

ಜಗಜ್ಜಾಲಪಾಲಂ ಜನಸ್ತುತ್ಯಶೀಲಂ ।
ಭವಾರಣ್ಯದಾವಂ ಭೃತ ಸ್ವಾನುಭಾವಂ ॥
ಶಿವಾನಂದಕೋಶಂ ದಿನೇಶಪ್ರಕಾಶಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೧॥

ಸ್ವತಂತ್ರ ಸ್ವಲೀಲಂ ಗಣೇಂದ್ರಾನುಕೂಲಂ ।
ಮಿಲನ್ಮೂಲಮಂತ್ರಂ ಪ್ರಣೀತೇಶ ತಂತ್ರಂ ॥
ಶಿವಧ್ಯಾನಸಕ್ತಂ ಪರಾನಾದಿಮುಕ್ತಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೨॥

ಪರಿವ್ರಾಡ್ವರೇಣ್ಯಂ ಗಣೇಶಾಗ್ರಗಣ್ಯಂ ।
ಸದಾಸತ್ಯಭಾಷಂ ಶಿವಜ್ಞಾನಭೂಷಂ ॥
ಸರುದ್ರಾಕ್ಷಮಾಲಂ ಲಸದ್ಭಸ್ಮಫಾಲಂ ।
ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ॥೩॥

# ಈ ಸಂಚಿಕೆಯಲ್ಲಿ







# ಶ್ರೀವಾಣಿ

ಸಾಮಾನ್ಯವಾಗಿ ಜಗತ್ತಿನ ಎಲ್ಲ ಮಹಾತ್ಮರ ಮರಣವೂ ದುರಂತಮಯವೇ. ಬಹುಶಃ ಅದಕ್ಕೆ ಕಾರಣ ಅವರೆಸಗಿದ ಕ್ರಾಂತಿಯನ್ನು ಅರಗಿಸಿಕೊಳ್ಳಲಾಗದ ತತ್ಕಾಲೀನ ಸಮಾಜದ ಪ್ರತಿಕೂಲವರ್ತನೆಯೇ. ಜಗತ್ತಿನ ಶ್ರೇಷ್ಠ ತತ್ತ್ವಜ್ಞಾನಿ ಸಾಕ್ರಟೀಸ್ ವಿಷಪ್ರಾಶನ ಮಾಡಿ ಸತ್ತ. ಏಸು ಶಿಲುಬೆಗೇರಿದ, ಬುದ್ಧ – ಗಾಂಧಿ - ಪೈಗಂಬರಿಗೆ ಒದಗಿದ ಗತಿಯೂ ಇದೇ. ಇದರಂತೆ ಈ ಒಂದು ಮರಣದ ದುರಂತ, ಧಾರ್ಮಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ-ಸಾಹಿತ್ಯಿಕ ಕ್ಷೇತ್ರಗಳಲ್ಲಿ ಸಮಗ್ರ ಕ್ರಾಂತಿಯನ್ನು ಮಾಡಿದ ಬಸವಣ್ಣನವರಿಗೂ ತಪ್ಪಲಿಲ್ಲ. ಆದರೆ "ಕಾಲೋಽಯಂ ನಿರವಧಿಃ ವಿಪುಲಾಚ ಪೃಥ್ವೀ" ಎಂದ ಹಾಗೆ ವಿಶಾಲವಾದ ಈ ಪೃಥ್ವಿಯಲ್ಲಿ ಎಂದಾದರೂ ಒಂದು ದಿನ ಮುಂದಿನ ಸಮಾಜ ಇಂಥ ಮಹಾತ್ಮರ ಕ್ರಾಂತಿಯನ್ನು ಸ್ವಾಗತಿಸುತ್ತದೆ. ಆ ಕ್ರಾಂತಿಯ ವೈಚಾರಿಕತೆಯ ಹಿನ್ನೆಲೆಯಲ್ಲಿ ತನ್ನ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತದೆ. ಈ ಪ್ರಕಾರವಾಗಿ, ಅನೇಕಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿರುವ ನಮಗೆ ಬಸವಣ್ಣನವರ ಸಮಗ್ರ ಕ್ರಾಂತಿಯು ಇಂದು ಅತ್ಯವಶ್ಯಕವಾಗಿ ಬೇಕಾಗಿದೆ.

## "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

* * *

ಸಹ ಸಂಪಾದಕರು

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಅಜೀವ ಸದಸ್ಯತ್ವ 151-00 ರೂ


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.






—ಟಿ. ಆರ್. ಮಹಾದೇವಯ್ಯ

## ಲೇಸೆನಿಸಿಕೊಳ್ಳುವ ಬದುಕು

ತಾನು ಸುಖವಾಗಿ ಬದುಕಬೇಕು ಎಂಬ ಬಯಕೆ ಪ್ರತಿ ಜೀವಿಗೂ ಇರುತ್ತದೆ. ಆದರೆ ತನ್ನಂತೆಯೇ ತಮ್ಮ ಜೊತೆಯಲ್ಲಿ ಬಾಳುವವರೂ ಸುಖವಾಗಿರಲಿ ಎಂದು ಬಯಸುವವರು, ಅದರಂತೆ ನಡೆದುಕೊಳ್ಳುವವರು ಕೆಲವೇ ಮಂದಿ. ಇನ್ನೊಬ್ಬರು ನಮಗೆ ಕೇಡು ಮಾಡಬಾರದು ಎಂದು ಬಯಸುವಂತೆಯೇ ನಾವೂ ಉಳಿದವರಿಗೆ ಅದನ್ನು ಬಯಸಬಾರದು ಎಂಬ ಸದ್ಭಾವನೆ ಮೂಡಿದಾಗ ಎಲ್ಲೆಲ್ಲೂ ಸೌಹಾರ್ದ ವಾತಾವರಣವೇರ್ಪಡುತ್ತದೆ.

ಲೇಸೆನಿಸಿಕೊಳ್ಳುವ ಬಾಳೆಂದರೆ ಲೋಕದಲ್ಲಿ ನಾವು ಎಲ್ಲರನ್ನೂ ಮೆಚ್ಚಿಸಿ ಬಾಳಲಾದೀತೆ? ಈ ಪ್ರಶ್ನೆ ಏಳುತ್ತದೆ. ಅದು ಸಾಧ್ಯವಿಲ್ಲ, ಏಕೆಂದರೆ ಒಬ್ಬೊಬ್ಬರೂ ತಮಗೆ ಉಚಿತವೆಂದು ಕಾಣುವ ಒಂದೊಂದನ್ನು ಹೇಳುತ್ತಾರೆ. ಅವೆಲ್ಲವನ್ನು ಕೇಳುತ್ತಾ ಅನುಸರಿಸ ಹೋದರೆ ಏನೂ ಸಾಧಿಸಲಾಗದೆ ದಿಙ್ಮೂಢರಾಗಬೇಕಾಗುತ್ತದೆ, ಅಷ್ಟೆ. ಅದಕ್ಕೇ 'ಜಗದೀಶನನ್ನು ಮೆಚ್ಚಿಸಬಹುದು ಜನ ಮೆಚ್ಚಿಸಲಾಗ' ಎಂಬ ಅನುಭವದ ಮಾತು ಹೊಮ್ಮಿದೆ.

ಇದನ್ನು ಕಂಡೇ ಮಡಿವಾಳ ಮಾಚಿದೇವ ಹೀಗೆಂದಿದ್ದು :

ಉಂಡರೆ ಭೂತನೆಂಬರು, ಉಣದಿದ್ದರೆ ಚಕೋರಿಯೆಂಬರು ;<br>
ಊರೊಳಗಿರ್ದಡೆ ಸಂಸಾರಿಯೆಂಬರು, ಅಡವಿಯೊಳಗಿರ್ದಡೆ ಮರ್ಕಟನೆಂಬರು ;<br>
ಮಾತನಾಡಿದರೆ ಪಾಪಕರ್ಮಿಯೆಂಬರು, ಮಾತನಾಡದಿರ್ದಡೆ ಮುಸುಕಕರ್ಮಿ ಎಂಬರು ;<br>
ಮಲಗದಿರ್ದಡೆ ಚೋರನೆಂಬರು, ಮಲಗಿರ್ದಡೆ ಜಡದೇಹಿಯೆಂಬರು.<br>
ಇಂತೀ ವಸುಧೆಯೊಳಗೆ ಎಂಟು ವಿಧವ ಕಳೆಯಲಳವಲ್ಲ ಕಾಣಾ ಕಲಿದೇವರ ದೇವಾ

(ಮಡಿವಳ ಮಾಚಿದೇವ ವಚನ 27.)

'ಜನ ಮೆಚ್ಚಿಸಿ ಬಾಳಲಾಗದು, ಮನಮೆಚ್ಚುವಂತೆ ಬಾಳು' ಎಂದರು ಅನುಭಾವಿಗಳು. ಸರಿ, ಮನ ಮೆಚ್ಚುವುದೆಂದರೆ ನಾವು ಏನೇ ಮಾಡಲಿ, ಅದನ್ನು ನಮ್ಮ ಮನಸ್ಸು ಮೆಚ್ಚೇ ಮೆಚ್ಚುತ್ತದೆಯಲ್ಲಾ ? ಗುಲಗಂಜಿಗೆ ತನ್ನ ಮೈಮೇಲಿನ ಕಪ್ಪುಚುಕ್ಕೆಯೇ ತಿಳಿದಿಲ್ಲವಂತೆ. ಹಾಗಾದರೆ ಏನು ಗತಿ ? ಇದಕ್ಕೂ ಒಂದು ಪರಿಹಾರವನ್ನು ಸೂಚಿಸಿ

ದ್ದಾರೆ ಅವರು. ನಮ್ಮನ್ನು ನಾವು, ನಮ್ಮತನವನ್ನು ದೂರವಿಟ್ಟು, ನೋಡುವುದನ್ನು ಅಭ್ಯಾಸಮಾಡಬೇಕು. ನಿಷ್ಪಕ್ಷಪಾತವಾಗಿ ಆತ್ಮನಿರೀಕ್ಷಣೆಮಾಡಿಕೊಳ್ಳುವುದನ್ನು ಕಲಿಯಬೇಕು. ಇದಕ್ಕೆ ಯಾವುದೇ ನಿರ್ದಿಷ್ಟ ಶಿಕ್ಷಣ ಬೇಕಿಲ್ಲ. ಅನುಭವವೇ ದೊಡ್ಡ ಗುರುವಾಗಿ ನಮಗೆ ಕಲಿಸುತ್ತದೆ. ನಮ್ಮ ಮನದ ಸರಕನ್ನೆಲ್ಲಾ ಬಿಚ್ಚಿ ಹೊರಗಿಟ್ಟು ಅದರಲ್ಲಿ ಒಳ್ಳಿತು-ಕೆಟ್ಟುದನ್ನು ಗುರುತಿಸುವ ಜಾಣ್ಮೆ ಕ್ರಮೇಣ ಮೈಗೂಡುತ್ತದೆ. ನಮ್ಮ ನಡವಳಿಯನ್ನು ನಾವೇ ಪರಿಶೀಲಿಸಿ ನಿರುದ್ವಿಗ್ನತೆಯಿಂದ ಉಚಿತಾನುಚಿತತೆಗಳನ್ನು ಕಂಡುಕೊಳ್ಳುವ ಅವಕಾಶವುಂಟಾದರೆ ನಾವು ಲೇಸಾದ ಬದುಕನ್ನು ರೂಪಿಸಿಕೊಳ್ಳಲು ಸಾಧ್ಯವಾಗುತ್ತದೆ. ತಾನು ಸುಖವಾಗಿದ್ದು ನಾಲ್ಕುಜನಕ್ಕೂ ಹಿತವಾಗುವಂತೆ ಬದುಕುವ ಕ್ರಮ ಇದು. ಅದನ್ನೇ ಲೇಸಾದ ಬದುಕು ಎನ್ನುವುದು, ಹೀಗೆ ಲೇಸೆನಿಸಿಕೊಂಡು ಕ್ಷಣವಾದರೂ, ಸಾಕು, ಒಂದು ದಿನವಾದರೂ ಸಾಕು ಬದುಕಿದರೆ ಬಾಳು ಸಾರ್ಥಕ.

ಲೇಸೆನಿಸಿಕೊಂಡು ಐದು ದಿನ ಬದುಕಿದರೇನು ?
ಲೇಸೆನಿಸಿಕೊಂಡು ನಾಲ್ಕು ದಿನ ಬದುಕಿದರೇನು ?
ಲೇಸೆನಿಸಿಕೊಂಡು ಮೂರುದಿನ ಬದುಕಿದರೇನು ?
ಲೇಸೆನಿಸಿಕೊಂಡು ಎರಡುದಿನ ಬದುಕಿದರೇನು ?
ಕೂಡಲ ಸಂಗಮ ದೇವರ ವಚನದಲ್ಲಿ
ಲೇಸೆನಿಸಿಕೊಂಡು ಒಂದುದಿನ ಬದುಕಿದರೇನು ? (ಬಸವ. 154).

ಎಂದರು ಬಸವಣ್ಣ.

ಹಾಗಿಲ್ಲದೆ ಥೂ, ಛೀ ಎನಿಸಿಕೊಂಡು, ನೆರೆಹೊರೆಯವರಿಗೆ ಮುಳ್ಳಾಗಿ, ಹೊತ್ತ ಭೂತಾಯಿಯ ಅಂಗದ ನೋಲಣ ಹುಣ್ಣಾಗಿ ಬಾಳುವುದಕ್ಕಿಂತ ಸಾಯುವುದು ಲೇಸು ಎಂದಿದ್ದಾಳೆ ಅಕ್ಕಮಹಾದೇವಿ.

ನಿಮ್ಮ ನಿಲವಿಂಗೆ ನೀವು ನಾಚಬೇಡವೆ?
ಅನ್ಯರಕೈಯಲ್ಲಿ ಅಲ್ಲ ಎನಿಸಿಕೊಂಬ ನಡೆ–ನುಡಿಯೇಕೆ ?
ಅಲ್ಲ ಎನಿಸಿಕೊಂಬುದರಿಂದ ಆ ಕ್ಷಣವೇ ಸಾವುದು ಲೇಸು ಕಾಣಾ
ಚೆನ್ನಮಲ್ಲಿಕಾರ್ಜುನಾ

(ಅಕ್ಕನ ವಚನಗಳು. 164)

ಡಿವಿಜಿಯವರು ಜೀವನ ಸಿದ್ಧಾಂತವನ್ನು ಹೀಗೆ ಭಟ್ಟಿ ಇಳಿಸಿದ್ದಾರೆ :—

ಹುಲ್ಲಾಗು ಬೆಟ್ಟದಡಿ ಮನೆಗೆ ಮಲ್ಲಿಗೆಯಾಗು
ಕಲ್ಲಾಗು ಕಷ್ಟಗಳ ವಿಧಿ ಸುರಿಯೆ
ಬೆಲ್ಲಸಕ್ಕರೆಯಾಗು ದೀನದುರ್ಬಲರಿಂಗೆ
ಎಲ್ಲರೊಳೊಂದಾಗು ಮಂಕುತಿಮ್ಮ.



## ನ ವ ನೀ ತ

ನರಸ್ಯಾಭರಣಂ ರೂಪಂ ರೂಪಸ್ಯಾಭರಣಂ ಗುಣಃ ।
ಗುಣಸ್ಯಾಭರಣಂ ಜ್ಞಾನಂ ಜ್ಞಾನಸ್ಯಾಭರಣಂ ಕ್ಷಮಾ ॥

ನರನಿಗೊಡೆವೆಯು ಅವನ ರೂಪು ಚೆಲುವು
ರೂಪಕ್ಕೆ ಆಭರಣ ಅವನ ಗುಣವು
ಅಂಥ ಗುಣಕಾಭರಣ ಜ್ಞಾನ ತಾನು
ಜ್ಞಾನಕ್ಕೆ ಕ್ಷಮೆ ತಾನು ಆಭರಣವು.

ಆಯುಃ ಕರ್ಮ ಚ ವಿತ್ತಂ ಚ ವಿದ್ಯಾ ನಿಧನಮೇವ ಚ ।
ಪಂಚೈತಾನ್ಯಪಿ ಸೃಜ್ಯಂತೇ ಗರ್ಭಸ್ಥಸ್ಯೈವ ದೇಹಿನಃ ॥

ಆಯುಷ್ಯ, ಉದ್ಯೋಗ ಮತ್ತು ಸಂಪತ್ತು
ಜೊತೆಗೆ ವಿದ್ಯೆಯು, ಮರಣದಾಪತ್ತು
ಇರುವಾಗಲೇ ನರನು ಗರ್ಭದೊಳು ತಾನು
ವಿಧಿಸುವ ವಿಧಿ ಅವನಿಗೀ ಐದನು.

ಆಪತ್ಸು ಮಿತ್ರಂ ಜಾನೀಯಾದ್ಯುದ್ಧೇ ಶೂರಮೃಣೇ ಶುಚಿಮ್
ಭಾರ್ಯಾಂ ಕ್ಷೀಣೇಷು ವಿತ್ತೇಷು ವ್ಯಸನೇಸು ಚ ಬಾಂಧವಾನ್॥

ಕಷ್ಟದಲಿ ಗೆಳೆಯನನು, ಯುದ್ಧದಲಿ ಶೂರನನು
ಸಾಲದಲಿ ಸತ್ಯತೆಯನರಿಯಬೇಕು
ಹಣ ಕಡಿಮೆಯಿದ್ದಾಗ ಮಡದಿಯನು ಮತ್ತೆ
ದುಗುಡದಲಿ ಬಂಧುಗಳನರಿಯಬೇಕು.

—ಕಾವ್ಯಸುಧಾಪ್ರಿಯ
ಕೆ. ಜಿ. ರಂಗಯ್ಯ

# ವಿಶ್ವಮಾನವ ಪ್ರೇಮಿಗಳ ಪಂಕ್ತಿಯಲ್ಲಿ ಅಗ್ರಗಣ್ಯ ಸ್ಥಾನ ಭಗವಾನ್ ಬಸವಣ್ಣನವರಿಗೆ

ಭಗವಾನ್ ಬಸವಣ್ಣನವರಿಗೆ ಜಗತ್ತಿನ ವಿಚಾರವಾದಿಗಳ ವಿಶ್ವಮಾನವ ಪ್ರೇಮಿಗಳ ಪಂಕ್ತಿಯಲ್ಲಿ ಅಗ್ರಸ್ಥಾನವನ್ನು ಕೊಟ್ಟಿದ್ದಾರೆ. ಈ ಕೊಡುಗೆ ದಾಕ್ಷಿಣ್ಯವಲ್ಲ, ಯಥಾರ್ಥವಾದದ್ದು. ಮನುಕುಲದ ಮಂಗಳ ಮುಹೂರ್ತವನ್ನು ಅಹರ್ನಿಶಿ ಜೀವನದುಸಿರಿನಂತೆ ನಿರ್ವಹಿಸಿದ ವ್ಯಕ್ತಿಯವರು. ವ್ಯಕ್ತಿಯ ಜೀವನದ ಸಮಗ್ರ ಕ್ರಾಂತಿಯ ನೇಕಾರರು, ಇಹದಲ್ಲಿದ್ದು ಇಹವನ್ನು ಗೆಲ್ಲುವ, ಲೋಕದ ಮಧ್ಯದಲ್ಲಿದ್ದು ಲೋಕವನ್ನು ಗೆದ್ದು ಗೆಲ್ಲುವ ಮಾರ್ಗ ಸಂದೇಶವನ್ನು ದಯೆಗೈಯ್ದ ಲೋಕೋತ್ತರ ಪುರುಷರವರು. ನರಲೋಕವನ್ನು ಹರಲೋಕವನ್ನಾಗಿ ಮಾಡುವ ಮಹಾ ಮಣಿಹವನ್ನು ಹೊತ್ತು ಮರ್ತ್ಯಕ್ಕವತರಿಸಿದ ಮಹಾಂತ ಈ ಪುಣ್ಯಪುರುಷನ ಜೀವನ ಸಂದೇಶವನ್ನು ನಾಡಿನ ಜನತೆಗೆ ತಿಳಿಯ ಹೇಳುವಸಲವಾಗಿ ದೈಹಿಕ ಶ್ರಮವನ್ನು ಲೆಕ್ಕಿಸದೆ ಪ್ರಚಾರಗೈಯುತ್ತಿರುವ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರ ಪ್ರಚಾರ ವೈಖರಿ ಅನುಪಮವಾದುದು. ದಿನವಿಡೀ ಬಸವ ಜಯಂತ್ಯುತ್ಸವ ಕಾರ್ಯಕ್ರಮ ನಡೆಯಬೇಕು. ಬಸವ ತತ್ತ್ವ ಸಂದೇಶದ ಎರಡು ಸಮಾರಂಭಗಳು ನಡೆಯಬೇಕು. ಬೆಳಿಗ್ಗೆ 10 ಹಂಟೆಗೆ ಒಂದು ಸಭೆ ಮಧ್ಯಾಹ್ನ ಪ್ರಸಾದ ವಿನಿಯೋಗ. ಸಂಜೆ ನಾಲ್ಕು ಘಂಟೆಗೆ ಮತ್ತೆ ಸಭೆ ಇಡೀ ರಾತ್ರಿ ಶ್ರೀ ಬಸವೇಶ್ವರರ ನಾಟಕ ಪ್ರದರ್ಶನ. ನಾಟಕದ ಕೊನೆಯ ದೃಶ್ಯವಿರುವಾಗ ಅಪಾರ ಸಂಖ್ಯೆಯಲ್ಲಿ ಸೇರಿದ್ದ ಪ್ರೇಕ್ಷಕ ವರ್ಗದವರನ್ನ ಕುರಿತು ದಿನವಿಡೀ ನಡೆದ ಕಾರ್ಯಕ್ರಮದ ಸಿಂಹಾವಲೋಕ ಕ್ರಮದಲ್ಲಿ ಉಪಸಂಹಾರ ರೂಪ ಉಪದೇಶ. ಇಡೀ ದಿನ ಒಟ್ಟು ಸುಮಾರು ಮೂರು ನಾಲ್ಕು ಘಂಟೆಗಳ ಕಾಲ ನಿರರ್ಗಳವಾಗಿ ಬಸವಣ್ಣನವರ ಸಂದೇಶವನ್ನು ಜನತೆಗೆ ತಣಿಸುವುದು ಪೂಜ್ಯರ ಉತ್ಸವ ವ್ಯವಸ್ಥೆ. ಹೀಗಾಗಿ ಪ್ರಸಕ್ತ ಸಾಲಿನಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ನಡೆದ ಮತ್ತು ನಡೆಯಲಿರುವ ಉತ್ಸವಗಳ ವಿವರ ಹೀಗಿದೆ.

27–3–83 ರಂದು ಅರಿವೇಸಂದ್ರ, ಗುಬ್ಬಿ ತಾ||. 2–4–83 ಕಲ್ಕೆರೆ, ಬೆಂಗಳೂರು ದಕ್ಷಿಣ. 10–4–83 ಕಂಬಾಳು, ನೆಲಮಂಗಲ ತಾ||. 16–4–83 ತಂಡಾಳು, ಗೌರೀಬಿದನೂರು ತಾ||. 18–4–83 ಕಿರಿಕೊಡ್ಲಿಮಠ, ಉತ್ತರ ಕೊಡಗು. 21-4-83 ಶ್ರೀ ಮಹಂತೇಶ್ವರ ಸ್ವಾಮಿ ಗದ್ದುಗೆ ಮಠ, ಮಾಗಡಿ ತಾ||. 23-4-83 ನಲ್ಲೂರು, ಗುಬ್ಬಿ ತಾ||. 26-4-83 ಹಟ್ಟಿಹಳ್ಳಿ, ತುರುವೇಕೆರೆ ತಾ||. 30-4-83 ದೇವನಹಳ್ಳಿ, ಬೆಂಗಳೂರು ಜಿಲ್ಲೆ. 5–5–83 ಕೆಸ್ತೂರು, ತುಮಕುರು ತಾ||. 8-5-83 ಶ್ರೀ ಗುರುವಣ್ಣ ದೇವರಮಠ, ಬೆಂಗಳೂರು. 15-5-83 ಪುರುಷನಹಳ್ಳಿ, ದೊಡ್ಡಬಳ್ಳಾಪುರ ತಾ|| 18–5–83 ಹೊಸಕೋಟೆ. 21–5–83 ಅಮ್ಮಸಂದ್ರ. 23–5–83 ತಾವರೆಕೆರೆ, ನೆಲಮಂಗಲ ತಾ||

●



# "ಹಾಸಿಗೆ ಇದ್ದಷ್ಟು ಕಾಲು ಚಾಚು"

—ಎಚ್. ಎಸ್. ಸಿದ್ಧಗಂಗಪ್ಪ. ಎಂ. ಎ.,

ಇದು ಜನಪ್ರಿಯ ಗಾದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬುದು ಮತ್ತೊಂದು ಗಾದೆ. ನಮ್ಮ ಜನಪದ ಅನುಭವದ ಸಾರ ಗಾದೆ. ಹಾಸಿಗೆ ಇರುವಷ್ಟಕೆ ಕಾಲನ್ನು ನೀಡಬೇಕು ಎಂಬುದು ಇದರ ಬಾಹ್ಯಾರ್ಥ. ಹೊರನೋಟಕ್ಕೆ ಹಾಸಿಗೆ ಮತ್ತು ಕಾಲಿಗಷ್ಟೇ ಸಂಬಂಧವಿರುವಂತೆ ಕಂಡುಬಂದರೂ, ಒಳ ಹೊಕ್ಕು ನೋಡಿದಾಗ, ಇದರ ಅಂತರಾಳವನ್ನು ಕೆದಕಿ ನೋಡಿದಾಗ ವಿಶ್ವ ರೂಪವೇ ಕಂಡು ಬರುತ್ತದೆ. ಸಮಸ್ತ ಜೀವನಕ್ಕೆ ಸಂದೇಶವನ್ನು ನೀಡುತ್ತದೆ.

ಇಲ್ಲಿ ಹಾಸಿಗೆ ನಮ್ಮಲ್ಲಿರುವ ಆಸ್ತಿ, ಸಂಪತ್ತು, ಗಳಿಕೆಗೆ ಸಂಕೇತವಾದರೆ, ಕಾಲು ಚಾಚುವುದು ಆಸ್ತಿ, ಗಳಿಕೆಗೆ ಅನುಗುಣವಾಗಿ ವೆಚ್ಚಮಾಡಬೇಕು. ಅದಕ್ಕೆ ಬದುಕನ್ನು ಅಳವಡಿಸಿಕೊಳ್ಳಬೇಕೆಂಬುದನ್ನು ಪ್ರತಿನಿಧಿಸುತ್ತದೆ. ಸಂಪಾದನೆ ಹೆಚ್ಚು ಹೋದಂತೆ, ವ್ಯಕ್ತಿಯ ದೈನಂದಿನ ಆವಶ್ಯಕತೆಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುವುದು ಒಂದು ವಿಧವಾದರೆ, ದುಡಿಯದೆ ಅನವಶ್ಯಕವಾಗಿ ಅವಶ್ಯಕತೆಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುವುದು ಮತ್ತೊಂದು ರೀತಿ. ಜೀವನ ನಿರ್ವಹಣೆಗಾಗಿ, ದಿನ ನಿತ್ಯದ ಬದುಕನ್ನು ಸರಿದೂಗಿಸುವುದಕ್ಕಾಗಿ, ದುಡಿಯುತ್ತಲೇ ಇರಬೇಕಾಗುತ್ತದೆ. ದುಡಿಯದೆ ಇದ್ದರೆ, ಹಿರಿಯರು ಗಳಿಸಿಟ್ಟ ಆಸ್ತಿ ದಿನೇ ದಿನೇ ಕರಗುತ್ತಾ ಹೋಗುತ್ತದೆ. ಇಂಥವರನ್ನು ಕಂಡೇ ಇರಬೇಕು "ಕೂತು ಉಣ್ಣುವವನಿಗೆ ಕುಡಿಕೆ ಹಣ ಸಾಲದು" ಎಂಬ ಗಾದೆ ಹುಟ್ಟಿಕೊಂಡಿರಬೇಕು. ಬೆವರು ಸುರಿಸಿ ಕಷ್ಟ ಪಟ್ಟು ದುಡಿಯುವವನಿಗೆ ಹಣದ ಬೆಲೆಯ ಅರಿವಿರುತ್ತದೆ.

ಸಂಪಾದನೆಗಿಂತಲೂ ಹೆಚ್ಚು ವೆಚ್ಚಮಾಡುತ್ತಾ ಹೋದರೆ ಅಂಥವರು ಬೇಗ ಕಷ್ಟಗಳ ಸಂಕೋಲೆಗೆ ಸಿಕ್ಕುತ್ತಾರೆ. ಮುಂದಾಲೋಚನೆ ಮಾಡದೆ ಅಧಿಕ ವೆಚ್ಚ ಮಾಡುವುದರಿಂದ ಜೀವನ ನಿರ್ವಹಣೆಯಲ್ಲಿ ಏರುಪೇರಾಗುತ್ತದೆ. ತಮ್ಮ ಇತಿಮಿತಿಗಳನ್ನು ಅರ್ಥಮಾಡಿಕೊಳ್ಳದೆ ಬೇರೊಬ್ಬರನ್ನು ನೋಡಿ ಅನುಸರಿಸಲು ಹೋದರೆ ಇರುವುದನ್ನು ಕಳೆದುಕೊಂಡು ತಮ್ಮನ್ನು ನಂಬಿದವರನ್ನು ಬೀದಿಪಾಲು ಮಾಡಿರುವ, ಮಾಡುತ್ತಿರುವುದನ್ನು ನಾವು ದಿನನಿತ್ಯ ನೋಡುತ್ತಲೇ ಇದ್ದೇವೆ.

ನೆರೆ ಹೊರೆಯವರು ಮಗಳ ಮದುವೆಯನ್ನು ಅದ್ದೂರಿಯಾಗಿ ಸುತ್ತಮುತ್ತಲಿನ ಜನ ಮೆಚ್ಚಿ ಹೊಗಳುವಂತೆ ಮಾಡಿದರು, ತಾನು ಅವರಿಗಿಂತ ಏನು ಕಡಿಮೆ ತಾನು ತನ್ನ ಮಗಳ ಮದುವೆಯನ್ನು ವೈಭವದಿಂದ ಮಾಡಿಸಬೇಕು. ಅವನು

ಮದುವೆಗೆ ಜೋಡಿಮೇಳ ಕರೆಸಿದರೆ ತಾನು ಅದಕ್ಕಿಂತಲೂ ಉತ್ತಮವಾದ ಬ್ಯಾಂಡ್ ಸೆಟ್ ತರಿಸಬೇಕು. ಸಂಗೀತ ಕಛೇರಿಯನ್ನು ಏರ್ಪಡಿಸಬೇಕು, ಅವರು ಎರಡು ಬಗೆಯ ಸಿಹಿ ಮಾಡಿಸಿದರೆ, ತಾನು ಬಗೆ ಬಗೆಯ ಸಿಹಿ ಮಾಡಿಸಿ ಭಲೇ ಎನಿಸಿಕೊಳ್ಳಬೇಕು. ಹೀಗೆ ಯೋಚಿಸಿ ಛಲಕ್ಕಾದರೂ ಚೆನ್ನಾಗಿ ಮದುವೆ ಮಾಡಬೇಕೆಂದು ಇರುವ ಆಸ್ತಿಯನ್ನು, ಅಡವಿಟ್ಟು ಸಾಲಮಾಡಿ ಮುಂದಿನದನ್ನು ಯೋಚಿಸದೆ ದುಂದು ವೆಚ್ಚದಿಂದ ಮದುವೆ ಮಾಡಿ ಕೊನೆಗೆ ಸಾಲವನ್ನು ತೀರಿಸುವುದಿರಲಿ ಅದರ ಬಡ್ಡಿಯನ್ನು ಕೊಡಲಾಗದೆ ಅಡವಿಟ್ಟ ಆಸ್ತಿಯನ್ನು ಅವರಿಗೇ ಬಿಟ್ಟುಕೊಟ್ಟು ಬೀದಿ ಬೀದಿ ಅಲೆಯುವುದನ್ನು ನೋಡುತ್ತಿದ್ದೇವೆ. ಇದು ಯಾವ ಪುರುಷಾರ್ಥಕ್ಕಾಗಿ ಎಂಬುದನ್ನು ಮನಗಾಣಬೇಕು. ಮಗಳ ಮದುವೆಯನ್ನು ತುಂಬಾ ಅದ್ದೂರಿಯಿಂದ ಮಾಡಿದ ಎಂದು ಬೆನ್ನು ಚಪ್ಪರಿಸಿದವರು, ಇವನು ಸಾಲಗಾರನಾಗಿ ಆಸ್ತಿಯನ್ನು ಕಳೆದುಕೊಂಡು ಕಂಡ ಕಂಡವರ ಮುಂದೆ ಕೈ ಒಡ್ಡುವುದನ್ನು ಕಂಡಾಗ ಯಾರೂ ಅವನ ಸಹಾಯಕ್ಕೆ ಬರುವುದಿರಲಿ, ತಿರುಗಿಯೂ ಸಹ ನೋಡುವುದಿಲ್ಲ. ಕೆಟ್ಟ ಮೇಲೆ ಬುದ್ಧಿ ಬಂತು, ಅಟ್ಟ ಮೇಲೆ ಒಲೆ ಉರೀತು ಎನ್ನುವಂತಾಗಬಾರದು.

ಅವಶ್ಯಕತೆಯನ್ನು ಮೀರಿ ದುಂದು ವೆಚ್ಚ ಮಾಡುವುದಕ್ಕಿಂತ ಎಷ್ಟು ಬೇಕೋ ಅಷ್ಟನ್ನು ವೆಚ್ಚ ಮಾಡಿ ದುಡಿಮೆಯ ಸ್ವಲ್ಪ ಭಾಗವನ್ನಾದರೂ ಉಳಿಸುವ ಅಭ್ಯಾಸವನ್ನು ಬೆಳೆಸಿಕೊಂಡರೆ ಅದರಿಂದ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳಲು ಇದರಿಂದ ನೆರವಾಗುತ್ತದೆ. "ಹನಿಗೂಡಿದರೆ ಹಳ್ಳ ತೆನೆಗೂಡಿದರೆ ರಾಶಿ" ಎಂಬ ನಾಣ್ಣುಡಿಯನ್ನು ಪ್ರತಿಯೊಬ್ಬರೂ ನೆನಪಿನಲ್ಲಿಡಬೇಕು. ಕೂಡಿಡುವ ಈ ಗುಣ ವ್ಯಕ್ತಿಗಳಲ್ಲಿ ಅಲ್ಲದೆ ಪ್ರಾಣಿ ಪಕ್ಷಿಗಳಲ್ಲಿಯೂ ಕಾಣಬಹುದು.

ತಮ್ಮ ಆದಾಯಕ್ಕೆ ಅನುಗುಣವಾಗಿ ಜೀವನದ ಅವಶ್ಯಕತೆಗಳನ್ನು ಹೊಂದಿಸಿಕೊಳ್ಳಬೇಕು. ಇಲ್ಲದೆ ಹೋದರೆ ತಲೆಗಟ್ಟಿ ಇದೆ ಎಂದು ಬಂಡೆಗೆ ಚಚ್ಚಿಕೊಂಡಂತಾಗುತ್ತದೆ. ಯೌವನದ ಅಮಲಿನಲ್ಲಿ ಮುಂದಿನದನ್ನು ಯೋಚಿಸದೆ ಮನೆತುಂಬ ಮಕ್ಕಳನ್ನು ಪಡೆದರೆ ಅವರಿಗೆ ಸರಿಯಾದ ಶಿಕ್ಷಣ, ಆಹಾರ, ಬಟ್ಟೆಗಳನ್ನು ಒದಗಿಸಲಾರದೆ ತೊಂದರೆಪಡಬೇಕಾಗುತ್ತದೆ. ಮುನ್ನೆಚ್ಚರಿಕೆಯಿಂದ ಒಂದೆರಡು ಮಕ್ಕಳನ್ನು ಪಡೆದು ಅವರಿಗೆ ಉತ್ತಮ ಶಿಕ್ಷಣ ನೀಡಿದರೆ ಅವರ ಭವಿಷ್ಯ ಉಜ್ವಲವಾಗುತ್ತದೆ. ಇದರಿಂದ ತಂದೆ ತಾಯಿಯರ ಮನಸ್ಸು ಪ್ರಫುಲ್ಲವಾಗುತ್ತದೆ.

ಜೀವನವನ್ನು ಹೇಗೆ ನಡೆಸಬೇಕು, ಹೇಗೆ ನಡೆಸಿದರೆ ಚೆನ್ನ ಎಂಬುದನ್ನು ಅನುಭವದಿಂದ ಕಂಡುಕೊಂಡ ನಮ್ಮ ಜನಪದರು "ಹಾಸಿಗೆ ಇದ್ದಷ್ಟು ಕಾಲು ಚಾಚು'' ಎಂದು ಸರಳವಾಗಿ ಅಭಿವ್ಯಕ್ತಪಡಿಸಿದ್ದಾರೆ. ಯಾವ ವ್ಯಕ್ತಿ ತನ್ನ ಇತಿಮಿತಿಯನ್ನು ಅರ್ಥಮಾಡಿಕೊಂಡು ಜೀವನ ನಡೆಸುತ್ತಾನೆಯೋ ಅವನ ಜೀವನ ಸುಖಮಯವಾಗುತ್ತದೆ.



# ದಯವೇ ಧರ್ಮದ ಮೂಲ

—ಶಾಂತಾದೇವಿ ಮಾಳವಾಡ

ಬಸವಣ್ಣನವರು ಮುಹೂರ್ತದಲ್ಲಿ, ಎದ್ದು ಧ್ಯಾನಸ್ಥರಾಗಿ ಕುಳಿತಿದ್ದರು, ನಂತರ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಒಂದು ಶಿವಪೂಜೆಗೆ ಹೂವುಗಳನ್ನಾಯ್ದು ತರುತ್ತಿದ್ದರು, ಆಕಳ ಕೊಟ್ಟಿಗೆಗೆ ಹೋಗಿ ಅವುಗಳ ಮೈಮೇಲೆ ಕೈಯ್ಯಾಡಿಸಿ, ಗಂಗೆ, ಗೌರಿ, ಗಿರಿಜೆ, ಮೊದಲಾದ ಆಕಳುಗಳನ್ನು ಹೆಸರಿಡುತ್ತಿದ್ದರು. ಅವುಗಳ ನಲಿವು ಗೆಲುವಿನ ಜೀವನವನ್ನು ಕಂಡು ಸಂತಸಪಡುತ್ತಿದ್ದರು. ಉಪವನಕ್ಕೆ ಧ್ಯಾನಮುಗಿಸಿ ಹೋಗುತ್ತಿದ್ದರು. ಅಲ್ಲಿ ಸಾಕಿದ ಮೊಲ, ನವಿಲು, ಗಿಳಿಗಳ ಬಳಗಕ್ಕೆಲ್ಲಾ ತಮ್ಮ ಕೈಯ್ಯಾರೆ ಆಹಾರವನ್ನು ಹಾಕಿ ಸ್ನಾನಕ್ಕೆ ಹೋಗುವುದು ಬಸವಣ್ಣನವರ ನಿತ್ಯ ನಿಯಮ.

ಆಕಳ ಹಿಂಡು ಬೆಳಗ್ಗೆ ಮೇಯಲು ಅಡವಿಗೆ ಹೋಗಿ ಸಾಯಂಕಾಲ ಮನೆಗೆ ಬರುತ್ತಿದ್ದವು. ಬಂದೊಡನೆ ಗಂಗಾಂಬಿಕೆ, ನೀಲಾಂಬಿಕೆಯರು ಎಲ್ಲಾ ಆಕಳುಗಳನ್ನು ಆತ್ಮೀಯತೆಯಿಂದ ಮೈದಡವಿ ಹುಲ್ಲು ಹಾಕಿ ಅನುಭವ ಮಂಟಪದ ಕಾರ್ಯಕ್ರಮಗಳಿಗೆ ಹೋಗುತ್ತಿದ್ದರು. ಒಂದು ದಿನ ಸಾಯಂಕಾಲ ಮೇಯಲು ಹೋದ ಆಕಳುಗಳು ಬರಲೇ ಇಲ್ಲ. ಅವುಗಳ ದಾರಿ ಕಾದು ಬೇಸತ್ತು ಗಂಗಾಂಬಿಕೆಯರು ಅನುಭವ ಮಂಟಪಕ್ಕೆ ಹೋದರು, ಅಲ್ಲಿಯ ಕಾರ್ಯ ಕಲಾಪಗಳನ್ನೆಲ್ಲಾ ಮುಗಿಸಿದ ನಂತರ ಕೊಟ್ಟಿಗೆಗೆ ಬಂದು ನೋಡಿದರು. ಆಕಳ ಹಿಂಡಿನ ಸದ್ದೇ ಇಲ್ಲ. ಪಡಿದಾರಿ ಉತ್ತಣ್ಣನನ್ನು ಕರೆದು ಆ ಬಗೆಗೆ ವಿಚಾರ ಮಾಡಲು ತಿಳಿಸಿದರು. ಜಂಗಮರು ಸ್ನಾನ ಪೂಜೆ ಮುಗಿಸಿ ಪ್ರಸಾದಕ್ಕೆ ಸಿದ್ಧರಾದರು. ಅವರಲ್ಲಿ ಕೆಲವರು ಹೊಸ ಕಾಲನ್ನೇನು ಹಾಲು ಕೆನೆಯನ್ನೇವುದನ್ನರಿದ್ದರು. ಇಲ್ಲದೆ ಕೊಟ್ಟಿಗೆಯಲ್ಲಿ ಎಳೆಗರುಗಳು ತಾಯಿಯನ್ನು ನೆನೆದು, ಅಂಬಾ! ಅಂಬಾ! ಎಂದು ಕೂಗುತ್ತಲಿದ್ದವು. ನೀಲಾಂಬಿಕೆಯರು ಕರುಗಳ ಕೊರಗಿನ ಕೂಗನ್ನು ಕೇಳಿ ಕಳವಳಪಡುತ್ತಲಿದ್ದರು. ಆಗ ದನಗಾಹಿ ಬಾಲಕರು ಅಳುತ್ತಾ ಮಹಾಮನೆಗೆ ಬಂದರು.

ನಾಗಾಂಬಿಕೆಯರು ಅವರ ಬಳಿಗೆ ಹೋಗಿ "ಯಾಕಪ್ಪಾ" ಆಕಳುಗಳೆಲ್ಲಿ? ಎಂದಳು. ನೀಲಾಂಬಿಕೆ ಕರುಗಳನ್ನು ಬಿಟ್ಟು ಹೊರಗೆ ಬಂದು "ಎಳೆ ಕರುಗಳ ರೋದನೆ ಕೇಳಲು ಅಸಾಧ್ಯವಾಗಿದೆ? ಏನಾಯಿತು? ಆಕಳುಗಳೆಲ್ಲಿ? ಯಾಕೆ ಅಳುತ್ತಿರುವಿರಿ ಎಂದಳು.

ತಾಯಿ ನಿತ್ಯದಂತೆ ದನಗಳನ್ನು ಮೇಯಿಸಿ ಕೆರೆಗೆ ಒಯ್ದು ಮೈತೊಳೆದೆವು. ಇನ್ನೂ ಹೊರಡಬೇಕು ಎನ್ನುವಷ್ಟರಲ್ಲಿ ನಾಲ್ಕು ಜನ ಜ ಂ ಗ ಮ ವೇಷಧಾರಿ ಕಳ್ಳರು ಬಂದು ನಮ್ಮನ್ನು ಬಡಿದು ಅಂಜಿಸಿ ಆಕಳ ಹಿಂಡನ್ನು ಹೊಡೆದುಕೊಂಡು ಆ ಗುಡ್ಡದ ಆಚೆಗೆ ಹೋದರು. ತಾಯಿ ! ಏನು ಮಾಡಬೇಕೆಂಬುದೇ ತಿಳಿಯದೆ. ಇಲ್ಲಿಗೆ ಬಂದೆವು, ಎಂದು ದನಗಾಯಿಗಳು ಹೇಳಿದರು.

ಆ ವೇಳೆಗೆ ಬಸವಣ್ಣನವರು ರಾತ್ರಿಯ ಪೂಜೆ ಮುಗಿಸಿಕೊಂಡು. ಜಂಗಮರಾ ಥನೆ ನೋಡಲು ಬಂದರು. ಪ್ರಸಾದದ ವೇಳೆಯಾದರೂ ಅಲ್ಲಿ ಇನ್ನೂ ಯಾರು ಬಂದಿರಲಿಲ್ಲ. ಮಹಾಮನೆಯ ಹೊರಭಾಗದಲ್ಲಿ ಎಲ್ಲರೂ ಕೂಡಿ ಪ್ರಸಾದದ ವೇಳೆ ಯಾದರು ಅಲ್ಲಿ ಇನ್ನೂ ಯಾರೂ ಬಂದಿರಲಿಲ್ಲ. ಮಹಾಮನೆಯ ಹೊರಭಾಗದಲ್ಲಿ ಎಲ್ಲರೂ ಕೂಡಿ ಮುಂದೇನು ಮಾಡಬೇಕೆಂದು ವಿಚಾರಿಸುತ್ತಿರುವಾಗ ಬಸವಣ್ಣನ ವರು ಅಲ್ಲಿಗೆ ಬಂದರು.

"ನೀಲಾ ಪ್ರಸಾದದ ವೇಳೆಯಾಗಿದೆ ಇನ್ನೂ ಏಕೆ ಪ್ರಾರಂಭವಾಗಿಲ್ಲ" ಬಸವಣ್ಣನವರ ಪ್ರೀತಿಯ ಆಕಳ ಹಿಂಡು ಕಳವಾಗಿ ಹೋಗಿದೆ. ಕರುಗಳು ಹಂಬ ಲಿಸುತ್ತಿವೆ ಎಂಬುದನ್ನು ಹೇಳಿದರೆ ಬಸವಣ್ಣನವರ ಮನ ನೊಂದೀತು ಎಂದು ಭಾವಿ ಸಿದ ನೀಲಾಂಬಿಕೆ "ಈಗ ಪ್ರಸಾದದ ಪ್ರಾರಂಭವಾಗುವುದು". ಎಂದು ಹೇಳಿದಳು. ಎಲ್ಲರೂ ಗಂಭೀರವಾಗಿ ನಿಂತಿರುವುದನ್ನು ಕಂಡು ಏನೋ ನಡೆದಿದೆ ಎಂದೆನಿಸಿತು. ಆ ಬಸವಣ್ಣನವರಿಗೆ ಆಕಳುಗಳನ್ನು ಕಳೆದುಕೊಂಡು ಬಂದುದಕ್ಕಾಗಿ ಮಂತ್ರಿಗಳು ತಮ್ಮನ್ನು ಸೆರೆಮನೆಗೆ ಕಳುಹಬಹುದೆಂದು ಅಂಜಿದ ದನಗಾಯಿಗಳು ಅಳುತ್ತಾ ಬಸ ವಣ್ಣನವರ ಪಾದಕ್ಕೆರಗಿದರು.

"ಸ್ವಾಮಿ ! ತಂದೆ, ಕಳ್ಳರು ಆಕಳುಗಳನ್ನು ಒಯ್ದರು" ಎಂದರು.

"ಕಳ್ಳರು ! ಅದು ಹೇಗೆ ಒಯ್ದರು " ಎಂದು ನುಡಿದರು. ಬಸವಣ್ಣನವರ ಮುಖ ಗಂಭೀರವಾಯಿತು.

"ಜಂಗುಮವೇಷಧರಿಸಿ, ನಮ್ಮನ್ನು ಬಡಿದು ಆಕಳ ಹಿಂಡನ್ನು ಹೊಡೆದು ಕೊಂಡು ಹೋದರು.

"ಸಂಗಮನೇ ಜಂಗಮನಾಗಿ ಬಂದಿರಬೇಕು. ಜಂಗಮರಿಗೆ ಕಳ್ಳ ಎನ್ನ ಬೇಡಿರಿ ಜೋಕೆ' ಎಂದು ದನಗಾಯಿಗಳಿಗೆ ಎಚ್ಚರಿಕೆಯನ್ನಿತ್ತರು. ಬಸವಣ್ಣನ ವರು ಒಬ್ಬ ದನಗಾಯಿ ಧೈರ್ಯ ಮಾಡಿ ಮುಂದೆ ಬಂದು ತನ್ನ ಬೆನ್ನನ್ನು



ತೋರಿದ "ಮಹಾಸ್ವಾಮಿ ಕಳ್ಳರು ನನ್ನನ್ನು ಹೊಡೆದು ಕಂಬಳಿಯನ್ನು ಕಸಿದಕೊಂಡು ಹೊದರು, ಇದೋನೋಡಿರಿ ಬೆನ್ನುಮೇಲಿನ ಬಾಸುಳೆಗಳನ್ನು" ಆಗ ನಾಗಲಾಂಬಿಕೆ ದನ ಗಾಯಿಯನ್ನು ಕ ರೆ ದು ಬಳಿಗೆಹೋಗು ಗಂಗಾಂಬಿಕೆ ಎಣ್ಣೆ ಹಚ್ಚುವಳು. ಎಂದಳು ಬಸವಣ್ಣನವರ ಬಳಿ ಬಂದು.

ಬಸವಣ್ಣಾ, ಹಿಂದೊಮ್ಮೆ ಜಂಗಮ ರೂಪಿಕಳ್ಳ ನೀಲಾಂಬಿಕೆಯ ಆಭರಣಗ ಳನ್ನು ಕದ್ದುಯ್ದುವುದನ್ನು ಕಂಡು ಅವನು ನಿಜಜಂಗಮನೆಂದೇ ಭಾವಿಸಿ ನೀಲಾಂಬಿ ಕೆಯ ಆಭರಣಗಳನ್ನು ಕಳ್ಳನಿಗೆ ಕೊಟ್ಟೆ ಬಿಟ್ಟೆ! ಆಕಳ್ಳ ವಿಶಾಲ ಭಾವನೆಯ ಕಂಡು ಹೃದಯ ಪರಿವರ್ತನೆ ಹೊಂದಿ ನನ್ನ ಶಿ ಷ್ಯ ನಾ ಗಿ ಬಿಟ್ಟ. ಆದರೆ ಈಗಿನ ಪ್ರಸಂಗ ಬೇರೆಯೆ ಆಗಿದೆ ಎಂದಳು.

ಸ್ವಾಮಿ? ಕೊಟ್ಟಿಗೆಯಲ್ಲಿ ಎಳೆಗರುಗಳು ಅಂಬಾ. ಅಂಬಾ! ಎಂದು ಒರಲುವು ದನ್ನು ನಾಕೇಳಲಾರೆ ಬೇಗನೆ ಜನರನ್ನು ಕಳುಹಿಸಿ ಆಕಳುಗಳನ್ನು ತರಿಸಿರಿ ಎಂದಳು ನಿಲಾಂಬಿಕೆ.

ಆಗ ದನಗಾಹಿ ಬಾಲಕರು ಉತ್ಸಾಹದಿಂದ ಮುಂದೆ ಬಂದು ನಮ್ಮ ಜೊತೆಗೆ ಜನರನ್ನು ಕಳುಹಿಸಿರಿ ಕ ಳ್ಳ ರು ಹೋದಮಾರ್ಗವನ್ನು ತೋರಿಸುತ್ತೇವೆ" ಎಂದರು. ಮಡಿವಾಳ ಮಾಚಿದೇವರು, ಘಟ್ಟಿವಾಳಯ್ಯ, ತುರುಗಾಹಿ ರಾಮಣ್ಣ ಮೊದಲಾದ ವೀರ ಗಣಾಚಾರ ವೃತ್ತಿಯ ಶರಣರು ನಡೆಯಿರಿ ಹೋಗೋಣ ಮಹಾ ಮನೆಯಧನಗಳನ್ನು ಕಳ್ಳರಿಂದ ಬಿಡಿಸಿಕೊಂಡು ಬರೋಣ. ಕಳ್ಳರನ್ನು ಹಿಡಿದು ಕೊಂಡು ಬಂದು ಬಸವ ಣ್ಣನವರ ಪಾದಕ್ಕೆ ಬೀಳಿಸೋಣ.

ಶರಣರ ಈನುಡಿಗಳನ್ನು ಕೇಳಿದ ಬಸವಣ್ಣನವರು ನಿಡಿಸುಯ್ದುರು.

ಆಕಳ ಕಳ್ಳರು ಕೊಂಡೆಯ್ದರೆನ್ನದಿರಿಂಭೋ ನಿಮ್ಮ ಧರ್ಮ!
ಬೊಬ್ಬಿಡದಿರಿಂಭೋ ನಿಮ್ಮ ಧರ್ಮ
ಅಲ್ಲಿ ಉಂಬರೇ ಸಂಗ, ಇಲ್ಲಿ ಉಂಬರೆ ಸಂಗ!
ಕೂಡಲ ಸಂಗಮದೇವ ಏಕೋಭಾವ!!

ಮಾಚಿದೇವರು! ಇಲ್ಲಿ ಕರುಗಳು ಹಾಲಿಲ್ಲದೆ ಕೊರಗುತ್ತಿವೆ. ಅಲ್ಲಿ ಕರುಗಳನ್ನು ಕಾಣದೆ ಆಕಳಹಿಂಡು ಕಂಗೆಟ್ಟು ಒರಲುತ್ತಿರಬೇಕು. ಕರುಗಳ ಆರ್ತಧ್ವನಿ ಇಲ್ಲಿಯ ವರೆಗೂ ಕೇಳುತ್ತಿದೆ. ಬನ್ನಿರಿ ಶ ರ ಣ ರೆ ಎಳೆಗರುಗಳನೆಲ್ಲಾ ಒಂದು ಚಕ್ಕಡಿಯಲ್ಲಿ ಹಾಕಿರಿ. ಆ ಜಂಗಮರಿದ್ದೆಡೆಗೆಹೋಗಿ ಕರುಗಳನೆಲ್ಲಾ ಅವರಿಗೆ ಒಪ್ಪಿಸಿರಿ ಆಕಳುಗಳಿ ದ್ದಲ್ಲಿ ಕರುಗಳು ಇರಬೇಕು ಅಲ್ಲವೇ? ಎಂದರು.

ಬಸವಣ್ಣನವರ ಮಾತನ್ನು ಕೇಳಿ ಅಲ್ಲಿದ್ದವರೆಲ್ಲಾ ಅಚ್ಚರಿಪಟ್ಟರು. ಮಹಾಮಂತ್ರಿಗಳು! ಆಜ್ಞೆಯನ್ನು ಹೊರಡಿಸಿ ಕಳ್ಳರನ್ನು ಹಿಡಿದು ತರಿಸುವರು. ಕಳ್ಳರನ್ನು ದಂಡಿಸಿ ಆಕಳುಗಳನ್ನು ತಿರುಗಿ ತರಿಸುವರು ಎಂದು ಭಾವಿಸಿದರು. ಶರಣರಿಗೆ ಬಸವಣ್ಣನವರ ನುಡಿ ವಿಚಿತ್ರವೆನಿಸಿತು. ಆದರೆ ಮಹಾಮನೆಯಲ್ಲಿ ಬಸವಣ್ಣನವರ ನುಡಿಗೆ ಎದುರಾಡುವ ಶಕ್ತಿ ಒಬ್ಬರಿಗೂ ಇರಲಿಲ್ಲ. ಬಸವಣ್ಣನವರ ವಿಶಾಲ ದೃಷ್ಟಿ, ಜಂಗಮ ಪ್ರೇಮ, ಪ್ರಾಣಿ ದಯೆಗಳನ್ನು ಕಂಡು ದನಗಾಹಿ ರಾಮಣ್ಣ, ಮಡಿವಾಳ ಮಾಚಿದೇವರು ಮೊದಲಾದವರೆಲ್ಲ ಕೂಡಿ ಕರುಗಳನ್ನು ತೆಗೆದುಕೊಂಡು ಕಳ್ಳರನ್ನರಸುತ್ತ ಹೋದರು.

ರಾತ್ರಿಯ ಗಾಡಾಂಧಕಾರದಲ್ಲಿ ಕರುಗಳೊಂದಿಗೆ ನೂರಾರು ಜನ ದೀವಟಿಗೆಗಳನ್ನು ಹಿಡಿದುಕೊಂಡು ತಮ್ಮತ್ತ ಬರುತ್ತಿರುವುದನ್ನು ಕಂಡು ಕಳ್ಳರು ಮುಂದುಗಾಣದೆ ನಡುಗುತ್ತ ನಿಂತರು. ಈ ಜನ ನಮ್ಮನ್ನು ದಂಡಿಸದೆ ಬಿಡಲಾರರು ಎಂದು ಅಂಜಿದರು.

" ಕಳ್ಳರ ಮುಖಂಡನಾರು ಬಾ ಇಲ್ಲಿ " ಎಂದರು ಮಾಚಿದೇವರು.

ಕಳ್ಳರ ಮುಖಂಡ ನಡುಗುತ್ತಾ ಶರಣರ ಪಾದಕ್ಕೆರಗಿದನು.

ಅಯ್ಯಾ ನಿರಪರಾಧಿ ಧನಗಾಹಿಗಳನ್ನು ಬಡಿದು ಆಕಳುಗಳನೆಲ್ಲಾ ಹೊಡೆದುಕೊಂಡು ಬಂದಿರುವಿರಿ.

ದಯವಿಲ್ಲದ ಧರ್ಮವದಾವುದಯ್ಯಾ ?
ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯೂ
ದಯವೇ ಧರ್ಮದ ಮೂಲವಯ್ಯಾ ।
ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯ ॥

ಎಂದು ನಂಬಿದ ಬಸವಣ್ಣನವರು ಕರುಗಳ ಕೂಗನ್ನು ಕೇಳಲಾರದೆ ಅವುಗಳನ್ನು ನಿಮಗೆ ಒಪ್ಪಿಸಲು ತಿಳಿಸಿದ್ದಾರೆ. ತೆಗೆದುಕೊಳ್ಳಿರಿ ಈ ಕರುಗಳು, ತಾಯ ಹಾಲನ್ನು ಕುಡಿಯುವವರೆಗೆ ಬಸವಣ್ಣನವರು ಪ್ರಸಾದ ಸೇವಿಸುವುದಿಲ್ಲಾ. ಕರುಗಳು ತಾಯ ಹಾಲನ್ನು ಕುಡಿಯುವುದನ್ನು ಕಂಡು ನಾವೆಲ್ಲ ತಿರುಗಿಹೋಗುತ್ತೇವೆ ಎಂದು ಮಾಚಯ್ಯನವರು ಕರುಗಳನ್ನು ಆಕಳ ಬಳಿ ಹೊಡೆದರು.

ಹುಲ್ಲು ನೀರನ್ನು ಮುಟ್ಟದೆ ಕರುಗಳಿಗಾಗಿ ಕರುಬುತ್ತಿದ್ದ ಆಕಳುಗಳು ಉಲ್ಲಾಸಗೊಂಡವು ಕರುಗಳು ನೆಗೆಯುತ್ತಾ ಹೋಗಿ ತಾಯ ಮೊಲೆ ಹಾಲನ್ನುಣ್ಣಹತ್ತಿದವು. ಆಕಳುಗಳು ಸಂತಸದಿಂದ ಕರುಗಳ ಮೈಯನ್ನು ನೆಕ್ಕಹತ್ತಿದ್ದವು. ಆ ಮೂಕ ಪ್ರಾಣಿ



ಗಳ ಮಾತೃ ವಾತ್ಸಲ್ಯವನ್ನು ಕಂಡು ಶರಣರ ಹೃದಯ ಸಂತಸದಿಂದ ನಲಿಯುತ್ತಿತ್ತು. ಶರಣರನ್ನು ಕಂಡು ಅವರು ಕೊಡುವ ದಂಡನೆಗೆ ಸಿದ್ಧರಾಗಿ ನಿಂತ ಕಳ್ಳರು "ದಯವೇ ಧರ್ಮದ ಮೂಲ" ಎಂಬ ಬಸವ ವಾಣಿಯನ್ನು ಜೀವನದಲ್ಲಿ ಮೊದಲ ಸಲ ಕೇಳಿ ವಿಸ್ಮಿತರಾದರು. ಅವರ ಹೃದಯ ಅಲ್ಲೋಲಕಲ್ಲೋಲವಾಯಿತು. ಅದುವರೆಗೆ ತಾವು ಗೈದ ಕೊಲೆ, ಸುಲಿಗೆಗಳೆಲ್ಲ ಚಿತ್ರಪಟದಂತೆ ಕಣ್ಣೆದುರು ಹಾಯ್ದುಹೋದವು. ತಾವು ಗೈದ ಕಳ್ಳತನಕ್ಕಾಗಿ ಮಹಾಮಂತ್ರಿಗಳು ತಮ್ಮನ್ನು ಸೆರೆಮನೆಗೆ ಹಾಕಿಸಿ ಚಿತ್ರಹಿಂಸೆ ಕೊಡಿಸಬಹುದೆಂದು ಊಹಿಸಿದ ಕಳ್ಳರ ಮನಕ್ಕೆ ದಯೆ ಇರಬೇಕು ಸಕಲ ಪ್ರಾಣಿಗಳಲ್ಲಿ ಎಂಬ ಬಸವ ವಾಣಿ ಅದ್ಭುತ ಪರಿಣಾಮವನ್ನು ಬೀರಿತು. ಆಕಳ ಬಳಿ ಕರುಗಳನ್ನು ಕಳುಹಿಸಿದ ಬಸವಣ್ಣನವರ ಬಗೆಗೆ ಭಕ್ತಿ ಉದಯಿಸಿತು. ಕಣ್ಣಿಗೆ ಕವಿದ ಅಜ್ಞಾನದಿಂದ ಕತ್ತಲೆ ಹರಿಯಿತು.

"ತಂದೆ ನಮ್ಮ ತಪ್ಪನ್ನು ಸೈರಿಸಿರಿ" ಎಂದು ಮಾಚಿದೇವರ ಪಾದಕ್ಕೆರಗಿದರು.

"ಏಳಿರಿ ಎಲ್ಲರ ತಪ್ಪನ್ನು ಸೈರಿಸುವ ಮಹಾತ್ಮರಾದ ಬಸವೇಶ್ವರರಿದ್ದಾರೆ ಎಂದರು ಮಾಚಯ್ಯನವರು. ಅಯ್ಯಾ ಆಕಳನ್ನು ಕದ್ದ ಕಳ್ಳರ ಬಳಿ ಕರುಗಳನ್ನು ಕಳಿಸುವ ದಯಾಪರರು ಈ ಲೋಕದಲ್ಲಿ ಇದ್ದಾರೇಯೋ ? ಇಂಥ ಪಾವನ ಮೂರ್ತಿಗಳು ಇದ್ದ ಭೂಮಿಯಲ್ಲಿ ನಮ್ಮಂಥ ಪಾಪಿಗಳಿದ್ದೇವಲ್ಲಾ ! ನಮಗೆ ಈ ಪಾಪದಿಂದ ಬಿಡುಗಡೆಯಿಲ್ಲವೆ? ಶರಣರೆ ನಾವು ಇಂದಿನಿಂದ ಈ ಹೀನ ವೃತ್ತಿಯನ್ನು ತೊರೆಯುತ್ತೇವೆ. ನಮಗೊಂದು ಕಾಯಕ ದಯಪಾಲಿಸಿರಿ. ಈ ಆಕಳ ಹಿಂಡನ್ನು ಕರುಗಳನ್ನು ತಂದು ಮಹಾಮನೆಗೆ ಒಪ್ಪಿಸುತ್ತೇವೆ. ಒಂದೇ ಒಂದು ಸಲ ಮಹಾನುಭಾವ ಬಸವೇಶ್ವರರ ದರ್ಶನವನ್ನು ನಮಗೆ ಮಾಡಿಸಿರಿ. ಎಂದು ಕಳ್ಳರು ಶರಣರೊಂದಿಗೆ ಮಹಾಮನೆಗೆ ಬಂದರು.

ಶರಣರ ಬರುವಿಕೆಯನ್ನು ನಿರೀಕ್ಷಿಸುತ್ತಿದ್ದ ಬಸವಣ್ಣನವರು ಹೊರಗೆ ಬಂದರು. ಮಾಚಿದೇವರು ಕರುಗಳನ್ನು ಅವುಗಳ ತಾಯಿಯ ಬಳಿ ಬಿಟ್ಟುಬಂದಿರಾ ? ಎಂದು ಕೇಳಿದರು. ಆಗ ಕಳ್ಳರು ಬಂದು ಬಸವಣ್ಣನವರ ಪಾದಕ್ಕೆ ನಮಸ್ಕರಿಸಿದರು. ತೇಜಃಪುಂಜವಾದ ಬಸವೇಶ್ವರರ ದಯಾ ದೃಷ್ಟಿಯಿಂದ ಕಳ್ಳರ ಹೃದಯಗಳು ತೆರದವು. ಬಸವೇಶ್ವರರ ರಕ್ಷೆಯ ಗುಣವೆಂಬ ಗಂಗಾಜಲದಿಂದ ಕಳ್ಳರ ಮನ ತೊಳೆದು ಪವಿತ್ರವಾಯಿತು. ಅವರ ಕ್ರೂರ ದೃಷ್ಟಿ ನಾಶವಾಗಿ ಸೌಮ್ಯ ದೃಷ್ಟಿ ಮೂಡಿಬಂದಿತು. ಬಸವಣ್ಣನವರ ಪಾದಕ್ಕೆರಗಿದ ಕಳ್ಳರು ಹೃದಯ ಪರಿವರ್ತನೆ ಹೊಂದಿ ಕಳ್ಳತನಬಿಟ್ಟು ಕಾಯಕನಿರತರಾಗಿ ಮಹಾಮನೆಯಲ್ಲಿ ಉಳಿದರು.

# 'ಗಾದೆ ವೇದಕ್ಕೆ ಸಮಾನ' 3

—ಸಿ. ಕೆ. ಪರಶುರಾಮಯ್ಯ

**ಅಲಲಾ ಅನ್ನೊ ಅಳ್ಳಿಮರ ನಂಬಬಹುದು ಮುಳ್ಳಿ ಹಂಗಿರೋ ಕಳ್ಳಿ ನಂಬ ಬಾರ್ದು?**

ನೇರವಾಗಿ ಮಾತನಾಡುವವರು ಸಾಮಾನ್ಯವಾಗಿ ಮನಸ್ಸಿನಲ್ಲಿ ಏನೂ ಇಟ್ಟು ಕೊಂಡಿರದ ಸರಳ ಸ್ವಭಾವದವರು. ಇದ್ದುದನ್ನು ಮುಚ್ಚುಮರೆ ಇಲ್ಲದೆ ಹೇಳಿಬಿಡು ವುದು ಅವರ ಗುಣ. ಅಂತಹವರಿಂದ ಯಾವ ತೊಂದರೆಯೂ ಇಲ್ಲ. ಅಷ್ಟೇ ಅಲ್ಲ, ಅವರು ಉಪಯೋಗಿಗಳೂ ಆಗಿರುತ್ತಾರೆ. ಆದರೆ ಗುಪ್ತವಾಗಿದ್ದುಕೊಂಡು ಕೆಡುಕನ್ನು ಸಾಧಿಸುವವರು ಅಪಾಯಕಾರಿ. ಇವರನ್ನು ನಂಬುವುದು ಕಷ್ಟ. ಮನಸ್ಸನ್ನು ಬಿಚ್ಚಿ ಮಾತೇ ಆಡದಿರುವ ಇವರ ಅಂತರಂಗವನ್ನು ಅರಿಯುವುದು ಕಷ್ಟ. ಈ ಅಂಶವನ್ನು ಸುಳಿಗಾಳಿ ಬೀಸಿದರೂ ಅಲಲಾ ಎಂದು ಶಬ್ದ ಮಾಡುವ ಅರಳಿಮರ ನೀಡುವ ನೆರಳು ಹಾಗೂ ಏನೂ ಅರಿಯದಂತೆ ಬಿದ್ದಿರುವ ಕಳ್ಳಿಯ ಮೇಲೆ ಅರಿಯದೆ ಕಾಲಿಟ್ಟಾಗ ಚುಚ್ಚುವ ಮುಳ್ಳು ಮತ್ತು ಸೋರುವ ಹಾಲಿನ ಕೆಡುಕನ್ನು ಹೋಲಿಸಿ ಮನುಷ್ಯನ ಎರಡು ವಿರುದ್ಧ ವ್ಯಕ್ತಿತ್ವಗಳನ್ನು ಪ್ರತಿಬಿಂಬಿಸುತ್ತದೆ ಈ ಗಾದೆ.

**ಅಂದನೋಡಿದ್ರೆ ತಿಂದ್ಕೋಳ್ಳನ ಅನ್ನಿಸ್ತದೆ ಗುಣನೋಡಿದ್ರೆ ಗುದ್ದಿಕ್ಕೊಳ್ಳನ ಅನ್ನಿಸ್ತದೆ.**

ರೂಪಕ್ಕೆ ತಕ್ಕ ಗುಣ ಇದ್ದಾಗ ಮಾತ್ರ ವ್ಯಕ್ತಿತ್ವಕ್ಕೆ ಶೋಭೆ. ರೂಪ ಇಲ್ಲ ದಿದ್ದರೂ ಗುಣ ಇದ್ದಾಗ ಅದಕ್ಕೆ ಬೆಲೆ ಸಿಗುತ್ತದೆ. ಆದರೆ ರೂಪ ಇದ್ದು ಗುಣ ಇಲ್ಲ ದಿದ್ದರೆ ಅದಕ್ಕೆ ಏನೇನೂ ಬೆಲೆ ಇಲ್ಲ. ರೂಪಕ್ಕೆ ಮಾರುಹೋಗಿ ಗುಣವನ್ನು ಪರಿಗಣಿ ಸದೆ ಒತ್ತಾಯಕ್ಕೆ ಒಪ್ಪಿಕೊಂಡ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಮೇಲಿನ ಗಾದೆ ಹೊರ ಬಂದಿದೆ. ಕಣ್ಮನಗಳನ್ನು ತಣಿಸುವ ರೂಪವಿದೆ. ಆದರೆ ಗುಣನೋಡಿದರೆ ಎದೆ ಯೊಡೆದುಕೊಳ್ಳಬೇಕು. ಒಂದಕ್ಕೊಂದು ಸಾಮ್ಯವಿಲ್ಲದ ಜೋಡಿ.

**ಅ:ದೇನೆಂದರೆ ಅತ್ತೆ ಮಗಳು, ಕೊಂದೇನೆಂದ್ರೆ ಮಾವನ ಮಗಳು.**

ದಾಕ್ಷಿಣ್ಯಕ್ಕೆ, ಒತ್ತಾಯಕ್ಕೆ ಅಥವಾ ಹಳೆಯ ಸಂಬಂಧ ಕೈಬಿಟ್ಟು ಹೋಗುತ್ತದೆ ಯಲ್ಲಾ ಎಂಬ ಕಟ್ಟಿಗೆ ಬಿದ್ದು ಸಂಬಂಧದಲ್ಲಿ ಮಾಡಿಕೊಂಡ ಮದುವೆ ಜೀವನವನ್ನು ಸುಗಮಗೊಳಿಸಿದರೆ ಕ್ಷೇಮ. ಆದರೆ ಕೆಲವು ಸಂದರ್ಭದಲ್ಲಿ ನಿರೀಕ್ಷಿಸಿದ್ದರ ವಿರುದ್ಧವಾಗಿ



ಅವಾಗ ಕಟ್ಟಿಕೊಂಡವನ ಸ್ಥಿತಿ ಹೇಳತೀರದು. ಇಂತಹ ಪರಿಸ್ಥಿತಿಯಲ್ಲಿ ಹೆಂಡತಿಯ ಬಗ್ಗೆ ಆಡುವ ಪ್ರತಿಮಾತನ್ನೂ ಎಚ್ಚರಿಕೆಯಿಂದ ಆಡಬೇಕಾಗುತ್ತದೆ. ಸಂಬಂಧದ ಸಂಕೋಲೆಯಲ್ಲಿ ಮಾತು ಸೊರಗುತ್ತದೆ. ಈ ಉಭಯ ಸಂಕಟದ ಸ್ಥಿತಿಯನ್ನು ಗಾದೆ ಧ್ವನಿಸುತ್ತದೆ.

**ಆಚಾರ ಹೇಳಾಕೆ ಅವನ್ನ್ಕರೆಸಿ ಹೆಂಡ್ರನ್ನಬಿಟ್ಟು ಆರುತಿಂಗಳಾದೋನ್ನ**

ಹತ್ತು ಜನರೆದುರಿಗೆ ಆಚಾರ ವಿಚಾರಗಳನ್ನು ವಿವರಿಸಬೇಕಾದರೆ ಅದಕ್ಕೊಂದು ವ್ಯಕ್ತಿತ್ವ ಇರಬೇಕಾಗುತ್ತದೆ. ಏಕೆಂದರೆ ಅಂತಹ ಸ್ಥಾನಕ್ಕೆ ಒಬ್ಬನನ್ನು ಗುರುತಿಸಿ ಕರೆಯಲು ಬೇಕಾದ ಮೂಲ ಅಗತ್ಯವೇ ಅದು. ತಾನು, ನ್ಯಾಯವಾದ ಆದರ್ಶವಲ್ಲ ದಿದ್ದರೂ ಅದಕ್ಕೆ ಹತ್ತಿರವಾದ ನಾಲ್ಕುಜನ ಒಪ್ಪುವಂತಹ ಬದುಕನ್ನು ನಡೆಸುತ್ತಿರು ವವನು ಮಾತ್ರ ಇತರರಿಗೆ ಒಳ್ಳೆಯದು ಕೆಟ್ಟದ್ದನ್ನು ವಿವರಿಸಲು ಯೋಗ್ಯ. ಅದು ಬಿಟ್ಟು ತನ್ನ ಬದುಕೇ ಇತರರ ಅವಹೇಳನಕ್ಕೆ, ಅಪಹಾಸ್ಯಕ್ಕೆ, ಟೀಕೆಗೆ ಗುರಿಯಾಗಿರು ವಾಗ ಅಂತಹವನಿಂದ ನೀತಿ ಬೋಧನೆಯನ್ನು ಅಪೇಕ್ಷಿಸುವುದಾಗಲಿ, ಹಾಗೇನಾದರೂ ಅಪೇಕ್ಷೆಪಟ್ಟ ಸಂದರ್ಭದಲ್ಲಿ ಹಿಂದುಮುಂದು ನೋಡದೆ ಒಪ್ಪಿ ನೀತಿ ಹೇಳುವುದಾಗಲಿ ಈ ಎರಡೂ ಒಪ್ಪತಕ್ಕ ವಿಷಯಗಳಲ್ಲ, ಆಚಾರ ಹೇಳಲು ಯೋಗ್ಯತೆ ಇಲ್ಲದವನ ಹೆಸ ರನ್ನು ಆ ಕಾರ್ಯಕ್ಕೆ ಸೂಚಿಸಿದಾಗ ಅವನ ವ್ಯಕ್ತಿತ್ವದ ಬಗೆಗಿರುವ ಕಳಂಕವನ್ನು ಎತ್ತಿ ಹೇಳಿ ಅದು ಸರಿಯಾದ ನಿರ್ಣಯವಲ್ಲವೆಂಬುದನ್ನು ಮನದಟ್ಟು ಮಾಡುತ್ತದೆ ಈ ಗಾದೆ.

**ಆನೆಯಂಥದ್ದೂ ಮುಗ್ಗರಿಸುತ್ತದೆ.**

ಭವಬಂಧನದಲ್ಲಿ ಸಿಲುಕಿರುವ, ಸಂಸಾರ ಸಾಗರದಲ್ಲಿ ಈಜುತ್ತಿರುವ ಮಾನವನ ಬದುಕಿಗೆ ನೂರೆಂಟು ತೊಡಕುಗಳು. ಒಂದನ್ನು ಪರಿಹರಿಸಿಕೊಂಡರೆ ಮತ್ತೊಂದು ಮುತ್ತುತ್ತದೆ. ಈ ಎಡರುಗಳ ನಡುವೆ ಸಂಭಾವಿತ ಜೀವನ ನಡೆಸುವುದು ಒಂದು ಸಾಹಸದ ವಿಷಯ. ಹೀಗಿರುವಾಗ ನಾನು ತಪ್ಪನ್ನೇ ಮಾಡುವುದಿಲ್ಲ. ನನ್ನ ಜೀವನದಲ್ಲಿ ಎಂದೂ ಮುಗ್ಗರಿಸಿಯೇ ಇಲ್ಲ ಎನ್ನುವುದು ತುಂಬ ದಾಷ್ಟ್ಯದ ಮಾತಾಗುತ್ತದೆ. ಎಂತಹವರೂ ಒಂದಲ್ಲ ಒಂದು ಸಂದರ್ಭದಲ್ಲಿ ತಪ್ಪು ಮಾಡುತ್ತಾರೆ, ಎಡವುತ್ತಾರೆ. ಆದರೆ ಈ ತಪ್ಪುಗಳೇ ಜೀವನದಲ್ಲಿ ಸರಮಾಲೆಯಾಗಿ ಸುತ್ತಿಕೊಳ್ಳಬಾರದು. ಅವು ಆಗದಂತೆ ವಹಿಸುವ ಎಚ್ಚರಿಕೆ ಮುಖ್ಯ. ನಮ್ಮ ಎಚ್ಚರವನ್ನು ಶಕ್ತಿಯನ್ನು ಮೀರಿ ಆದ ತಪ್ಪು ಅನಿವಾರ್ಯ, ಅದನ್ನೇ ದೊಡ್ಡದಾಗಿ ಪರಿಗಣಿಸಿ ತಪ್ಪೆಸಗಿದವನನ್ನು ಹೀಯಾ ಳಿಸಬಾರದು. ಏಕೆಂದರೆ ಇಂದು ತಾನು ಮಾಡಿದಂತಹ ತಪ್ಪನ್ನು ಇನ್ನೊಬ್ಬ ಮಾಡ ಬಹುದು. ಅವನು ಮಾಡಿದ ತಪ್ಪನ್ನೇ ಮತ್ತೊಬ್ಬ ಮಾಡಬಹುದು. ಅದ್ದರಿಂದ

ಅನಿವಾರ್ಯವಾಗಿ ಆದ ತಪ್ಪನ್ನು ಗಣನೆಗೆ ತೆಗೆದುಕೊಳ್ಳದ ಔದಾರ್ಯ ನಮ್ಮಲ್ಲಿರಬೇಕು. ಏಕೆಂದರೆ ಆನೆ ತುಂಬ ಗಂಭೀರವಾಗಿ ನಡೆಯುವ ಪ್ರಾಣಿ. ಅಂತಹ ಪ್ರಾಣಿಯೂ ಒಮ್ಮೊಮ್ಮೆ ಮುಗ್ಗರಿಸುತ್ತದೆ. ಎಂದ ಮೇಲೆ ಬದುಕಿನ ನೂರೆಂಟು ಜಂಜಾಟದಲ್ಲಿ ತೊಡಗಿರುವ ಸಾಮಾನ್ಯ ಮನುಷ್ಯರು ತಪ್ಪು ಮಾಡುವುದು ಅನಿವಾರ್ಯ ಎಂಬುದನ್ನು ಆನೆಯ ನಿದರ್ಶನದೊಂದಿಗೆ ಹೇಳಿರುವ ಈ ಗಾದೆಯ ಅರ್ಥ ತುಂಬ ಗಂಭೀರವಾಗಿದೆ.

**ಆರಂಭದ ಬಡ ಕಷ್ಟ, ಅಧಿಕಾರದ ತುದಿ ಕಷ್ಟ**

ಇದೊಂದು ಲೋಕಾನುಭವ ಸಂಗತಿ. ಕೃಷಿ ಕಾರ್ಯಪ್ರಾರಂಭದಲ್ಲಿ ಎಂಬ ಕಷ್ಟ, ಸಮಸ್ಯೆಗಳು ಹೆಚ್ಚು. ಬಿತ್ತುವ ಸಲಕರಣೆಗಳನ್ನು ಹಿಡಿದು ಬೀಜ ಗೊಬ್ಬರಗಳನ್ನು ಹೊಂದಿಸಿಕೊಂಡ ಮೇಲೆ ಬೆದೆಯರಿತು ಹದವಾಗಿ ಬಿತ್ತಬೇಕು. ಹೆಜ್ಜೆ ಹೆಜ್ಜೆಗೂ ಎಚ್ಚರ ಅಗತ್ಯ. ರೈತನಿಗೆ ಬಿಡುವಿಲ್ಲದ ಕೆಲಸ. ಸ್ವಲ್ಪ ಉದಾಸೀನ ಮಾಡಿದರೂ ಮುಂದಿನ ಫಸಲಿಗೆ ಸಂಚಕಾರ. ಬಿತ್ತಿ ಪೈರು ಎದ್ದ ಮೇಲೆ ಆಗೊಮ್ಮೆ ಈಗೊಮ್ಮೆ ಹರಗಿ, ಕಳೆತೆಗೆಯುತ್ತ ಬೇಲಿ ಬಂಕ ಕಟ್ಟಿಕೊಂಡರೆ ವರುಣನ ಕೃಪೆಯಿಂದ ಬೆಳೆ ದಿನಕ್ಕೊಂದು ಚಂದವಾಗಿ ಬೇಗ ಬೆಳೆಯುತ್ತದೆ. ಅದನ್ನು ಸಮಾಧಾನದ ಕಣ್ಣಿನಿಂದ ನೋಡಿ ಆನಂದಿಸುವುದೇ ಒಂದು ಹಬ್ಬ ರೈತನಿಗೆ. ನಂತರ ಪೈರು ಕೊಯಿಲು. ಸುಗ್ಗಿ ಅವನ ಶ್ರಮಕ್ಕೆ ತಕ್ಕ ಫಲನೀಡಿ ಮನಸ್ಸಿಗೆ ನೆಮ್ಮದಿ. ಬದುಕಿಗೆ ಸಮೃದ್ಧಿ ತರುವ ಸಡಗರದ ಸನ್ನಿವೇಶ. ಅಧಿಕಾರದ ಮಾತು ಇದಕ್ಕೆ ವಿರುದ್ಧ. ಪ್ರಾರಂಭದಲ್ಲಿ ದೊಡ್ಡವರ ತಲೆಮೇಲೆ ಜವಾಬ್ದಾರಿ ಇರುತ್ತದೆ. ಕೆಳಗಿನವರ ಹೊಣೆ ಕಡಿಮೆ. ಹೇಳಿದಷ್ಟು ಕೆಲಸ. ವಹಿಸಿದಷ್ಟು ಕರ್ತವ್ಯ ಮುಗಿಸಿದರೆ ಆಯಿತು. ಆದರೆ ಒಂದು ಕ್ಷೇತ್ರದಲ್ಲಿ ಮೇಲು ಮೇಲಿನ ಹುದ್ದೆಗೆ ಹೋದಂತೆ ಜವಾಬ್ದಾರಿಯೂ ಹಿಗ್ಗುತ್ತ ಹೋಗುತ್ತದೆ. ಹತ್ತು ಜನರಿಂದ ಕೆಲಸ ತೆಗೆದು ಆ ಕ್ಷೇತ್ರದ ಒಟ್ಟು ಹೊಣೆಯನ್ನು ನಿವೇದಿಸಬೇಕಾಗುತ್ತದೆ. ಮೈಯೆಲ್ಲ ಕಣ್ಣಾಗಿದ್ದರೂ ಒಬ್ಬನ ಅಸಡ್ಡೆಯಿಂದ, ಅವಜ್ಞೆಯಿಂದ, ಅಜ್ಞಾನದಿಂದ ಕೆಲವು ಸಂದರ್ಭಗಳಲ್ಲಿ ಅನಾಹುತ ಸಂಭವಿಸಬಹುದು. ಬಿಡುವನ್ನು ಕಡೆಗಣಿಸಿ ಸಮಯದ ಮೌಲ್ಯವನ್ನರಿತು ಹಗಲಿರುಳು ದುಡಿಯಬೇಕಾಗಿರುತ್ತದೆ. ಹೊರಗೆ ನೋಡುವವರಿಗೆ ಅಧಿಕಾರ ಸುಖದ ಸುಪ್ಪತ್ತಿಗೆಯಾಗಿ ಕಂಡರೆ ಅದನ್ನು ನಿವೇದಿಸುವವರಿಗೆ ಅದು ಮುಳ್ಳಿನ ಹಾಸಿಗೆಯಾಗಿರುತ್ತದೆ.

ಈ ಅಂಶವನ್ನು ಹತ್ತಿರದ ನಿದರ್ಶನಗಳ ಮೂಲಕ ಮನದಟ್ಟು ಮಾಡುವ ಈ ಗಾದೆಯಲ್ಲಿ ಅಡಗಿರುವ ಲೋಕಾನುಭವ ಅಪೂರ್ವವಾದದ್ದು.

**ಆಸರು ಬೇಸರ ಕಳಕೊಳ್ಳೋಕೆ ಅಂತ ಅಕ್ಕನ ಮನೆಗೆ ಹೋದ್ರೆ, ಬೀಸೋ ರಾಗಿ ಮೊರತಂದು ಮುಂದಿಕ್ಕಿದರ.**



ಅನೇಕ ಸಂದರ್ಭಗಳಲ್ಲಿ ನಮ್ಮ ಊಹೆತಪ್ಪಾಗಿ ನಿರೀಕ್ಷಿಸಿದ್ದರ ವಿರುದ್ಧ ಪರಿಣಾಮಗಳಾಗುತ್ತವೆ. ಆಗ ಮನಸ್ಸಿಗೆ ಆಗುವ ನೋವು ಅಷ್ಟಿಷ್ಟಲ್ಲ. ಅನಿವಾರ್ಯವಾಗಿ ಸಹಿಸಿಕೊಳ್ಳಬೇಕಾಗುತ್ತದೆ. ದಿನನಿತ್ಯ ದುಡಿದು ದುಡಿದು ಬೇಸತ್ತಾಗ ನಾಲ್ಕು ಘಳಿಗೆ ಶ್ರಮ ಪರಿಹರಿಸಿಕೊಂಡು ವಿಶ್ರಾಮ ಪಡೆಯಲು ಒಡಹುಟ್ಟಿದ ಅಕ್ಕತಂಗಿಯರ ಮನೆಗೆ ಹೋಗುತ್ತಿದ್ದುದು ಹಿಂದಿನ ಕಾಲದಲ್ಲಿ ಇದ್ದ ಒಂದು ಅಭ್ಯಾಸ. ತನ್ನ ಮನೆಯಲ್ಲಾದರೆ ಒಂದಲ್ಲ ಒಂದು ಕೆಲಸದಲ್ಲಿ ತೊಡಗಿರುತ್ತಿದ್ದ ವ್ಯಕ್ತಿ ಅಕ್ಕನ ಮನೆಯಲ್ಲಿ ಬಿಡುವಾಗಿರಬಹುದಿತ್ತು. ಆದರೆ ಕೆಲವು ಅಕ್ಕಂದಿರು ಎಂತಹವರ ಕೈಯಲ್ಲೂ ದುಡಿಸುವ ಪ್ರವೃತ್ತಿಯವರು. ತಂಗಿ ಬೇಸರ ಕಳೆಯಲು ಬಂದಿದ್ದಾಳೆ. ಅವಳಿಗೆ ಶ್ರಮದ ಕೆಲಸ ಹೇಳಬಾರದು ಎಂಬ ವಿವೇಚನೆ ಇರುವುದಿಲ್ಲ. ಬಂದ ತಂಗಿಯನ್ನು ಆದರಿಸುವುದರ ಬದಲು, ಮೈಮುರಿತದ ದುಡಿಮೆಗೆ ತೊಡಗಿಸಿದಾಗಿನ ಸನ್ನಿವೇಶವನ್ನು ಈ ಗಾದೆ ವಿವರಿಸುತ್ತದೆ.

**ಆಳಾಗಿ ದುಡಿ, ಅರಸಾಗಿ ಉಣ್ಣು.**

ಆಳಾಗಿ ಕಷ್ಟಪಟ್ಟು ದುಡಿದವನು ಮಾತ್ರ ಸುಖ ಅನುಭವಿಸಲು ಅರ್ಹನಾಗುತ್ತಾನೆ. ಹಾಗೆ ದುಡಿದು ಉಣ್ಣುವವನಿಗೆ ಮಾತ್ರ ಸುಖ ಎಂತಹ ಬೆಲೆಯುಳ್ಳದ್ದೆಂಬುದು ಅರ್ಥವಾಗಲು ಸಾಧ್ಯ. ಆದ್ದರಿಂದ ಮನಸ್ಸಿಟ್ಟು ಮೈಮುರಿದು ಕೆಲಸಮಾಡಿದಾಗ ದುಡಿಮೆಯ ಮೌಲ್ಯ ಅರ್ಥವಾಗುತ್ತದೆ. ಆದ್ದರಿಂದ ದುಡಿಯುವ ಸಂದರ್ಭದಲ್ಲಿ ಅಂತಸ್ತನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಕೆಲಸ ಮಾಡಬೇಕು. ಸುಖ ಅದರಿಂದ ತಾನಾಗಿಯೇ ಒದಗಿ ಬರುತ್ತದೆ. ಅಂತಹ ಸುಖವನ್ನು ಅನುಭವಿಸುವಾಗ ಅದು ತನ್ನ ಪರಿಶ್ರಮದ ಫಲವಾದುದರಿಂದ ಮನಸ್ಸಿಗೆ ಹಿತವಾಗುತ್ತದೆ. ಇನ್ನೊಬ್ಬರ ಹಂಗಿಲ್ಲದೆ ಸವಿಯುವ ಸ್ವಾತಂತ್ರ್ಯವಿರುತ್ತದೆ.

(ಕೃಪೆ: ಜನಪದ)

# ದಿವ್ಯ ವಾಣಿ

—ವೀರಭದ್ರಪ್ಪಾ ಅಂಪಾನಿ, ಗೋಕಾಕ.

೧ ಓಂದಕ್ಷರವನ್ನು ಕಲಿಸಿದಾತ ಗುರು. ಅಜ್ಞಾನವೆಂಬ ಕತ್ತಲೆಯನ್ನು ಕಳೆಯುವ ಶಕ್ತಿಯುಳ್ಳವನೆ ಗುರು. ಜೀವನದ ಅತಿ ನಿಕಟ ಬಂಧುವೆಂದರೆ ಗುರು. ದೇಹವನ್ನು ಕೊಡುವವರು ತಂದೆ ತಾಯಿಗಳು. ಹೊಸ ಬಾಳನ್ನು ಕೊಟ್ಟು ಮುಕ್ತಿಯ ಮಾರ್ಗವನ್ನು ತೋರಿಸುವವ ಗುರು. ಹಿರಿದಾದ ಭವಸಮುದ್ರವನ್ನು ಬೃಹತ್ತಾದ ಧರ್ಮದ ಹಡಗದಿಂದ ಸಹಸ್ರಾರ ಜನರನ್ನು ದಾಟಿಸುವ ಅಂಬಿಗನೇ ಗುರು. ಕಾಮಧೇನು, ಚಿಂತಾಮಣಿ, ಕಲ್ಪವೃಕ್ಷಗಳಿಗಿಂತ ಗುರುವಿನ ಅನುಗ್ರಹ ಹಿರಿದಾದುದು. ಕಾಮಧೇನು ಇಚ್ಛಿತ ಪದಾರ್ಥಗಳನ್ನು ಕೊಟ್ಟರೆ ಗುರುವಿನ ಉಪದೇಶವು ಕಾಮವಾಸನೆಯನ್ನು ನಾಶಮಾಡುವದು. ಚಿಂತಾಮಣಿಯು ಚಿಂತಿಸಿದ ವಸ್ತುಗಳನ್ನು ಕೊಟ್ಟರೆ ಗುರುವಿನ ಉಪದೇಶವು ಶಿಷ್ಯನ ಚಿಂತನೆಯನ್ನೇ ಹರಣಮಾಡುವದು. ಕಲ್ಪವೃಕ್ಷವು ಕಲ್ಪನೆ ಮೂಡಿದ ವಸ್ತುಗಳನ್ನು ಕೊಟ್ಟರೆ ಗುರುವಿನ ಉಪದೇಶವು ಕಲ್ಪನೆಗೆ ನಿಲುಕದ ನಿಜ ಸುಖವನ್ನು ಕೊಡುವದು. ಮಹತ್ ತಪವನ್ನಾಚರಿಸಿದ ಯೋಗಿಗಳು ಕಾಣಬಹುದಾದ ಪರಮಾತ್ಮನನ್ನು ಶಿಷ್ಯನ ಜ್ಞಾನ ಚಕ್ಷುವಿನಲ್ಲಿರಿಸಿದ ಗುರುವಿನ ಉಪಕಾರವನ್ನು ಎಷ್ಟು ವರ್ಣಿಸಿದರೂ ಕಡಿಮೆ. ಹರ ಮುನಿದರೂ ಗುರು ಕಾಯುವನು.

೨ ಎಲ್ಲ ಜೀವಾತ್ಮರು ದೇವರ ಮಕ್ಕಳು, ನಿನ್ನಂತೆ ಅವರನ್ನು ಪೂಜಿಸು. ಉಚ್ಛ- ನೀಚ ಭಾವನೆಗಳನ್ನು ತೊರೆದು ಸಹೋದರರಂತೆ ನಡೆದುಕೊಂಡು ಜನರ ಅದರಲ್ಲಿಯೂ ನಮ್ಮ ಪ್ರಾರ್ಥನೆಯನ್ನು ದೇವರಿಗೆ ಮುಟ್ಟಿಸುವ ಅಂಚೆಪೆಟ್ಟಿಗೆಗಳಂತಿರುವ ದೀನ–ದಲಿತರ, ನಿರ್ಗತಿಕರ ಮತ್ತು ರೋಗಿಗಳ ಸೇವೆಯೇ ದೇವರ ಸೇವೆ ಅಂತಾ ತಿಳಿದು ಮನಸ್ಸೊಪ್ಪುವಂತೆ ತನು-ಮನ-ಧನದಿಂದ ಸೇವೆ ಮಾಡು. ಅದೇ ದೇವರ ಪೂಜೆ, ಅಂತರ್ಗತ ಪೂಜೆಯೇ ಅನುಸಂಧಾನ. ಸಗುಣರೂಪದಿಂದ ನಿರ್ಗುಣರೂಪಕ್ಕೆ ಮಾಡುವ ಚಿಂತನೆ. ಇಲ್ಲಿ ಬಾಹ್ಯ ಪೂಜಾ ಸಾಮಾಗ್ರಿಗಳ ಅವಶ್ಯಕತೆಯಿಲ್ಲ. ಸಕಲ ಸದ್ಗುಣಗಳೇ ಪೂಜಾ ಸಾಮಾನು, ಭಕ್ತಿಯೇ ಮಜ್ಜನಕ್ಕೆ ಜಲ, ವಿರತಿಯೇ ಗಂಧ, ಕರಣೇಂದ್ರಿಯಗಳೇ ಅಕ್ಷತೆ, ಅರಿವೆ ಪುಷ್ಪ, ಹರುಷವೇ ದೂಪ, ಪರಿಪೂರ್ಣತೆ ನೈವೇದ್ಯ, ದೇವರೇ ಕೊಟ್ಟ ಪತ್ರಿ, ಪುಷ್ಪ, ದೀಪ, ಧೂಪ, ಆರ್ಭಟಿಸುವ ಘಂಟಾನಾದದಿಂದ ನಿಜಭಕ್ತಿಯಿಲ್ಲದೆ ಆಡಂಬರದಿಂದ ಮಾಡುವ ಪೂಜೆ ಬರೀ " ಪೂಜೆ ".

೩ ದೇಹವಿರುವವರೆಗೆ ಕರ್ಮವನ್ನು ಮಾಡಲೇಬೇಕು. ಪಕ್ವಜ್ಞಾನ ಬರುವ ತನಕ ಕರ್ಮತ್ಯಾಗ ಹಿತವಲ್ಲ. ಆಸಕ್ತಿಯನ್ನು ಬಿಟ್ಟು ಕರ್ಮವನ್ನು ಮಾಡು. ಕರ್ಮ



ದಿಂದ ಬರುವ ಫಲಾಪೇಕ್ಷೆಯನ್ನು ಬಿಡುವದೇ ತ್ಯಾಗ. ಕಾಯಿ ಬಲಿತು ಹಣ್ಣಾದಾಗ ಗಿಡದಿಂದ ಹಣ್ಣು ತಾನೇ ಕಳಚಿಬೀಳುವಂತೆ ಜ್ಞಾನ ವಿಕಾಸವಾದಾಗ ಮಾನವನಲ್ಲಿಯ ಪಶುತ್ವವು ತಾನೇ ಇಲ್ಲದಾಗುವದು. ಕರ್ಮ ಮಾಡುವಲ್ಲಿ ಸ್ವ–ಪರ ಹಿತಾಹಿತಗಳಿವೆ. ಕ್ರಿಯೆ ಮಾಡುವಲ್ಲಿ ಸ್ವಹಿತಗಳಿವೆ, ಕಾಯಕ ಮಾಡುವಲ್ಲಿ ಸ್ವ–ಪರ ಹಿತಗಳಿವೆ. ಕರ್ಮಗಿಂತ ಕ್ರಿಯೆ, ಕ್ರಿಯೆಗಿಂತ ಕಾಯಕ ಶ್ರೇಷ್ಠ. ಶುದ್ಧ ಕಾಯಕದಲ್ಲಿ ಅರಿವು, ಸದಾಚರಣೆ, ಸುಜ್ಞಾನ, ಸತ್‌ಕ್ರಿಯೆಗಳು ಬೆರೆತಿವೆ. ದುರ್ಮಾರ್ಗದಿಂದ ಧನವನ್ನು ಸಂಪಾದಿಸಿ ಪಾಪಸಂಚಯವನ್ನು ತಂದುಕೊಳ್ಳುವುದಕ್ಕಿಂತ ಸತ್ಯ ಶುದ್ಧವಾದ ಕಾಯಕದಿಂದ ಹಿತಮಿತವಾದ ಸಂಪತ್ತನ್ನು ಪಡೆಯುವದು ಲೇಸು. ಜೀವನೋಪಾಯಕ್ಕಾಗಿ ಕೈಕೊಳ್ಳಬೇಕಾಗುವ ಸತ್ಯ ಶುದ್ಧವಾದ ಉದ್ಯೋಗವನ್ನು ಸ್ವಹಿತದೊಂದಿಗೆ ಪರಹಿತಕ್ಕಾಗಿ ನಿರ್ವಂಚನೆಯಿಂದ ಬಳಸುವದು ಕಾಯಕ.

೪ ಭೌತಿಕ ವಸ್ತುಗಳಾದ ಧನಕನಕಾದಿಗಳನ್ನು ಪಡೆದಂತೆ ಸುಖವನ್ನು ಬಾಹ್ಯ ಯಾವದೇ ವಸ್ತುವಿನಿಂದ ಪಡೆಯಲಿಕ್ಕಾಗದು, ಅದು ನಮ್ಮ ಮನೋಭೂಮಿಯಲ್ಲಿಯೇ ಹುದಗಿಕೊಂಡಿದೆ. ಅದು ನಿಮ್ಮಲ್ಲಿರುವ ವಸ್ತುವಿನ ಮೌಲ್ಯದ ಮೇಲೆ ಮಾತ್ರ ಅವಲಂಬಿಸಿದೆ. ಕಡಿಮೆ ಅವಶ್ಯಕತೆಗಳುಳ್ಳವರು ಹೆಚ್ಚು ಸುಖಿಗಳಾಗಿರುವರು. ಇಚ್ಛಿತ ಪದಾರ್ಥಗಳು ದೊರಕಿದಂತೆ ಅವಶ್ಯಕತೆಗಳು ಹೆಚ್ಚುತ್ತಲೇ ಹೋಗುವವು ಆದರೆ ಇಚ್ಛಿತ ಪದಾರ್ಥಗಳಿಂದ ಸುಖವು ದೊರೆಯಲಾರದು. ಮಾತು ಮತ್ತು ಕೃತಿಯಲ್ಲಿ ಅಂತರ ಕಡಿಮೆ ಮಾಡಿದಷ್ಟು ಜೀವನ ಸುಖದ ಹೆದ್ದಾರಿಯು ಹಗುರೆನಿಸುವದು. ಪರರ ಬಗೆಗೆ ಆತ್ಮೀಯತೆ ತೋರುತ್ತ ದೊಡ್ಡಸ್ತಿಕೆಯಲ್ಲಿ ಆಸ್ಥೆಯನ್ನು ತೋರಿಸದೆ ಬಡವನಾದರೂ ಸಂತೃಪ್ತ ಜೀವನವನ್ನು ಸಾಗಿಸುವವನೆ ಸುಖಿಯು. ವೈರಾಗ್ಯಕ್ಕಿಂತ ಯಾವ ಸೌಖ್ಯ ಸಂಪದಗಳಿಲ್ಲ. ಭೌತಿಕ ವಿಷಯಗಳ ವ್ಯಾಮೋಹ ತ್ಯಾಗವೇ ಸುಖವು. ದುಃಖಾತ್ಮಕ ಪರವಶತೆಯಿಂದ ಸುಖಾತ್ಮಕ ಆತ್ಮಶಕ್ತಿಯನ್ನು ಸಾಧಿಸುವಲ್ಲಿಯೇ ಜೀವನದ ಸೌಖ್ಯವಿದೆ. ಆತ್ಮನೇ ತಾನೆಂಬ ತನ್ನ ನಿಜ ಸ್ವರೂಪದ ದೃಢ ಅಪರೋಕ್ಷ ಜ್ಞಾನವೆ ನಿಜ ಸುಖದ ಸಾಗರ.

೫ ಶ್ರಾವಣ ಮಾಸವು ಅರಣ್ಯ ಸಂಪತ್ತನ್ನು, ವರ್ಣಮಯ ನಿಸರ್ಗಸಂಪತ್ತನ್ನು, ಎಲ್ಲ ಜೀವರಾಶಿಗಳಿಗೆ ಜೀವನಾಧಾರವನ್ನು ಒದಗಿಸುವದಲ್ಲದೆ ಸಾಮಾನ್ಯ ಮಾನವನ ಮನವನ್ನು ಆಧ್ಯಾತ್ಮ ಸಂಪತ್ತಿನ ಕಡೆಗೆ ಒಯ್ಯುವ ಧರ್ಮಮಾಸ ಮಠ-ಮಂದಿರಗಳಲ್ಲಿ ಪುಣ್ಯಾತ್ಮರ ಪುರಾಣ–ಪ್ರವಚನ ಮನೆಗಳಲ್ಲಿ ಮನಂಗೊಂಬುವ ಸಡಗರದ ಪೂಜೆ ಮನದಲ್ಲಿ ಧಾರ್ಮಿಕ ಭಾವನೆ ಮೊದಲಾದ ಮಾನವನ ಜೀವನೋದ್ಧಾರಕ್ಕೆ ನೆರವಾಗುವ ಸಾಮಾನ್ಯ ಸಾಧನಗಳನ್ನು ಸಾಧಿಸುವ ಮಾಸವು ಇದಾವರೆ ಸಾರ್ಥಕ ಜೀವನವನ್ನು ಸಾಗಿಸಿ ಶಾಶ್ವತ ಸುಖವನ್ನು ಆಸ್ವಾದಿಸಲು ಆತ್ಮಜ್ಞಾನವನ್ನು

ಮಾಡಿಕೊಂಡು ಸದ್ಗುರುಗಳ, ಸಾಧುಸಂತರ ಸೇವೆ ಮಾಡುತ್ತ ಸತ್‌ಶ್ರವಣ, ಪರಮಾತ್ಮನ ನಿಕಟಸಂಬಂಧನ್ನು ಬೆಳೆಯಿಸಿ ಆತನ ಸತತ ನಾಮಸಂಕೀರ್ತನೆಮಾಡುವ ಮಹಾತ್ಮರ, ಮಹಾನುಭಾವಿಗಳ ಸಂಪೂರ್ಣ ಆಯುಷ್ಯವೇ ಶ್ರಾವಣ ಮಾಸವು.

೬ ಪರೋಪಕಾರವೇ ಪುಣ್ಯ ಪರಪೀಡೆಯೇ ಪಾಪ ತತ್ವವನ್ನರಿತವನಲ್ಲಿ ಪರೋಪಕಾರದ ಪ್ರಕಾಶವಿದೆ. ತತ್ವ ಸಾಧನೆಯಿಂದ ಸರ್ವವನ್ನರಿಯುವ ತಾನು ತನ್ನನರಿತು ತನ್ನ ಸ್ಥೂಲ ದೇಹದ ಮೂಲಕ ಮಾಡತಕ್ಕ ಸೇವೆಯೇ ಪರೋಪಕಾರ ಇದಕ್ಕೆ "ಪರೋಪಕಾರಾರ್ಥಂ ಇದಂ ಶರೀರಂ" ಎಂದುದು ಕೂತುಂಡು ಕೊಡುವ ದಾನಕ್ಕಿಂತ ಮಾಡುವ ಪರೋಪಕಾರವೇ ಮಿಗಿಲು. ಪರರ ಉಪಕಾರ ಅಂದರೆ (ಪರ=ಪರಮಾತ್ಮ+ಉಪ=ಸಮೀಪ+ಕರ=ಮಾಡಿಕೊಳ್ಳು) ಪರಮಾತ್ಮನನ್ನು ಸಮೀಪ ಮಾಡಿಕೊಳ್ಳುವದು. ನದಿಗಳು, ವೃಕ್ಷಗಳು, ಪಶುಗಳು, ಫಲ-ಪುಷ್ಪಾದಿಗಳು ಇರುವದು ಪರೋಪಕಾರಕ್ಕಲ್ಲದೆ ಸ್ವ ಉಪಭೋಗಕ್ಕಲ್ಲ. ಯಾವದೇ ಪ್ರಕಾರದಿಂದ ಯಾವನೂ ತಾನೇ ಉಪಜೀವಿಸುವದಿಲ್ಲ. ಇನ್ನಿತರ ಉಪಕಾರಾರ್ಥವಾಗಿ ಯಾವನು ಜೀವಿಸುವನೋ ಅವನೇ ನಿಜವಾಗಿ ಜೀವಿಸುತ್ತಾನೆ. ಪರರಿಗೆ ಕೊಟ್ಟ ಮೇಲೆ ಯಾವದು ಉಳಿಯುವದೋ ಅದೇ ತನಗೆ. ಬಚ್ಚಿಟ್ಟದ್ದು ಯಾವದೋ ಅದು ಪರರಿಗೆ.

೭ ಸತ್ಕಾರ ಮಾಡುವದಕ್ಕಿಂತ ಸತ್ಸಂಗ ಮಾಡುವದೇ ಲೇಸು. ಸತ್ಕಾರವು ಐಹಿಕ ಸುಖಕ್ಕೆ ಸಾಧನವಾದರೆ ಸತ್ಸಂಗವು ಇಹಪರ ಸುಖಕ್ಕೆ ಸಾಧನ. ಸಮಾಜ ಸುಧಾರಕರೆಂದೆನಿಸಿಕೊಳ್ಳುವವರನ್ನು ಕರೆತಂದು ಹೊಗಳಿ ಶಾಲು ಹೊದಿಸಿ ಅವರನ್ನು ಸನ್ಮಾನದಿಂದ ಕಳುಹಿಸಿಕೊಡುವದಕ್ಕಿಂತ ಸದ್ಗುಣಗಳ ಸಾಗರದಂತಿರುವ ಮಹಾತ್ಮರ, ಸಜ್ಜನರ, ಸಾಧು-ಸಂತರ ಸಂಗದಲ್ಲಿರುವದು ಉತ್ತಮ. ಸಮುದ್ರದೊಳಗಿನ ನೆರೆತೆರೆಗಳ ಸಂಬಂಧದಂತೆ, ಪ್ರಯಾಣದಲ್ಲಿ ಸಹ ಪ್ರಯಾಣಿಕನೊಡನೆ ಇರಬಹುದಾದ ಸಂಬಂಧದಂತೆ. ಸತ್ಕಾರ ಮಾಡುವವರ ಮತ್ತು ಮಾಡಿಸಿಕೊಳ್ಳುವವರ ಸಂಬಂಧವಾದರೂ ಅಷ್ಟೇ ಕ್ಷಣಿಕ ಸಂಬಂಧ. ಆದರೆ ಸಜ್ಜನರೊಡನೆ ಇರುವ ಸಂಬಂಧ ಅಪಾರ. ಪರಿಮಳದ ಪುಷ್ಪವು ಬಾಡಿದರೂ ಅದರ ಪರಿಮಳವು ಉಳಿಯುವಂತೆ ಸಜ್ಜನರು ಸಾಯುಜ್ಯವನ್ನು ಹೊಂದಿದರೂ ಅವರ ಸದ್ಗುಣಗಳ ಸಂಯೋಗವು ಅಂದರೆ ಅವರ ದಿವ್ಯ ಗುಣಗಳ ಮನನವು ಹಾಗೆ ಉಳಿಯುವದು. ಸಜ್ಜನರ ಸಹವಾಸ ಸಂಭಾಷಣೆಯಿಂದ ಸತ್ಸಂಗವು-ಸತ್ಸಂಗದಿಂದ ನಿಸ್ಸಂಗತ್ವವು-ನಿಸ್ಸಂಗತ್ವದಿಂದ ನಿರ್ಮೋಹವು-ನಿರ್ಮೋಹದಿಂದ ಸಂತೃಪ್ತಿಯು-ಸಂತೃಪ್ತಿಯಿಂದ ನೈಜ ಸುಖ ಪ್ರಾಪ್ತವಾಗುವದರಿಂದ ಸತ್ಸಂಗವೇ ಲೇಸು. ಸತ್ಸಂಗವು ಧರ್ಮದ ಅತ್ಯಂತ ಪ್ರಧಾನ ಅಂಗವು.

೮ ಮುಕ್ತಿ ಸಂಪತ್ತನ್ನು ಗಳಿಸಲಿಕ್ಕೆ ಸದ್ಗುಣಗಳೇ ಸಾಧನ. ದುರಿತ ಕರ್ಮ



ವನು. ಮಾಡಬೇಡ, ಸರ್ವರಿಗೆ ಹಿತವನ್ನೇ ಬಯಸು. ಅಸತ್ಯ ಮಾತನಾಡಬೇಡ, ಅತಿಯಾದ ಲೋಭವನು ಬಿಡು. ಪರರ ದುಃಖವನ್ನು ಕಂಡು ಮರಗು. ನಿತ್ಯ ಕಾರ್ಯದಲ್ಲಿ ಬಂದದ್ದರಲ್ಲಿಯೇ ತೃಪ್ತಿ ಹೊಂದು. ಅಹಂಭಾವವನ್ನು ತುಳಿದು ಸತ್ವಭರಿತ-ತತ್ವಜ್ಞಾನವನ್ನು ಹುಡುಕು. ಕಪಟ, ಮೋಸ, ವಂಚನೆಗಳಿಗೆ ಮನಸ್ಸನ್ನು ಕೊಡದಿರು. ಸತ್ಸಂಗ ಮಾಡು, ಸಜ್ಜನರು ಮೆಚ್ಚುವಂತೆ ಬಾಳು, ಧನಿಕನಾದಾಗ ವಿನಯದಿಂದ ವರ್ತಿಸು. ಅನ್ಯರ ಉನ್ನತಿ ಕಂಡು ಮತ್ಸರಪಡಬೇಡ. ಸುಖ-ದುಃಖಗಳನ್ನು ಒಂದೇ ರೀತಿಯಲ್ಲಿ ಅನುಭವಿಸು. ಅಪತ್ತು ವಿಪತ್ತುಗಳಿಗೆ ಅಂಜದಿರು ಅವು ವಿಕಾಸಕ್ಕಲ್ಲದೆ ವಿನಾಶಕ್ಕಲ್ಲ. ವಿಷಯ ಸುಖಗಳಿಗೆ ಮನಸ್ಸು ಹರಿಹಾಯಿಸಬೇಡ, ನಶ್ವರ ದೇಹವನ್ನು ನಂಬಬೇಡ. ಚಂಚಲ ಮನಸ್ಸನ್ನು ಸ್ಥಿರವಾಗಿರಿಸಿಕೊಂಡಿರು, ವ್ಯರ್ಥ ಕಾಲಹರಣ ಮಾಡಬೇಡ, ವಿಷಯ ಸಂಸಾರವಿದನು ಕನಸೆಂದರಿ, ಆರು ನಾನೆಂದು ವಿಚಾರಿಸು, ಜೀವ ಶಿವೈಕ್ಯಕ್ಕೆ ಸುಜ್ಞಾನ ವೈರಾಗ್ಯ ಸಂಪತ್ತನ್ನು ಸಂಪಾದಿಸು, ಹುಟ್ಟು ಸಾವುಗಳ ಹೇಯ ಮಾರ್ಗ ತೊರೆದು ನಿನ್ನ ನಿಜ ಸ್ವರೂಪಾನಂದವನ್ನು ಹೊಂದು.

೯ ತೋಡಿದ ಬಾವಿಗೆ ಜಲವೆ ಸಾಕ್ಷಿ, ಮಾಡಿದ ಪಾಪಕ್ಕೆ ಮನವೆ ಸಾಕ್ಷಿ. ಮಾಡಿದ ದುರಿತ ಕರ್ಮಕ್ಕೆ ಪ್ರಾಯಶ್ಚಿತ್ತವೆ ಸಾಕ್ಷಿ, ಬಿಟ್ಟ ಆಶೆಗೆ ನಿರಾಶೆಯೇ ಸಾಕ್ಷಿ. ಉಂಡ ಊಟಕ್ಕೆ ತೃಪ್ತಿಯೆ ಸಾಕ್ಷಿ, ಮಾಡಿದ ಧರ್ಮಕ್ಕೆ ದಯವೆ ಸಾಕ್ಷಿ. ತೊಟ್ಟ ಶರೀರಕ್ಕೆ ರಾಗವೆ ಸಾಕ್ಷಿ, ಲಯವಾದ ಮನಸಿಗೆ ನಿರ್ವಾಸನೆ ಸಾಕ್ಷಿ. ಬಾಳಿದ ಜಗಕೆ ಇಳೆಯಾಣ್ಮನ ಕರುಣೆಯೆ ಸಾಕ್ಷಿ, ಮಾಡಿದ ಪುರುಷಾರ್ಥಕ್ಕೆ ಆತ್ಮನೆ ಸಾಕ್ಷಿ, ವೈರಾಗ್ಯಕ್ಕೆ ವಿಷಯಗಳ ವ್ಯಾಮೋಹ ತ್ಯಾಗವೆ ಸಾಕ್ಷಿ, ಶರೀರಾಶೆ ಬಿಟ್ಟದ್ದಕ್ಕೆ ಮರಣಕ್ಕಂಜದಿರುವದೆ ಸಾಕ್ಷಿ. ಸತ್ಯಕ್ಕೆ ಸುಳ್ಳನಾಡದಿರುವದೆ ಸಾಕ್ಷಿ, ಚಿತ್‌ಶುದ್ಧಿಗೆ ಸದ್ಗುಣಗಳೆ ಸಾಕ್ಷಿ, ಸ್ತುತಿ-ನಿಂದೆ ಸಮಭಾವಕ್ಕೆ ಹಿಗ್ಗು-ಕುಗ್ಗದಿರುವದೆ ಸಾಕ್ಷಿ, ದೇವಗುಣಕ್ಕೆ, ಜೀವಗುಣ ಅಳಿದದ್ದೆ ಸಾಕ್ಷಿ. ಕರಣ ವಿಜಯಕ್ಕೆ ಇಂದ್ರಿಯಗಳ ನಿರ್ವ್ಯಾಪರವೆ ಸಾಕ್ಷಿ. ಬ್ರಹ್ಮ ಸಾಕ್ಷಾತ್ಕಾರಕ್ಕೆ ಜ್ಞಾನೋದಯವೆ ಸಾಕ್ಷಿ. ಕ್ಷಮಾಗುಣಕ್ಕೆ ಪರರ ದುಷ್ಕೃತ್ಯಗಳನ್ನು ಸಹಿಸುವದೆ ಸಾಕ್ಷಿ, ಆತ್ಮನೈಕ್ಯತೆಗೆ ಭ್ರಾಂತಿ ಭ್ರಮೆ ನಶಿಸಿದ್ದೆ ಸಾಕ್ಷಿ.

೧೦ ಕಾಮನೆಗಳ ವಿಕಾಸ ಪ್ರೇಮದಿಂದ ಸಾಧ್ಯ. ರಾಕ್ಷಸೀ ವೃತ್ತಿಯ ವಿಕಾಸ ಹಿಂಸೆಯಿಂದ ಸಾಧ್ಯ. ದುರ್ಗುಣಗಳ ವಿಕಾಸ ದುಷ್ಟಜನ ಸಂಗದಿಂದ ಸಾಧ್ಯ. ಸದ್ಗುಣಗಳ ವಿಕಾಸ ಸಜ್ಜನ ಸಂಗದಿಂದ ಸಾಧ್ಯ. ಮಾನವತೆಯ ವಿಕಾಸ ನೈತಿಕತೆಯಿಂದ ಸಾಧ್ಯ. ಜೀವನ ವಿಕಾಸ ಅನುಭವದಿಂದ ಸಾಧ್ಯ. ಮನುಷ್ಯನ ಸ್ವಾಭಾವಿಕ ಧೈರ್ಯದ ವಿಕಾಸ ಅನುಭವದಿಂದ ಸಾಧ್ಯ. ಮನುಷ್ಯನ ಸ್ವಾಭಾವಿಕ ಧೈರ್ಯದ ವಿಕಾಸ ವಿಷಮ ಸಂದರ್ಭಗಳಲ್ಲಿ ತೋರುವ ಮಾನಸಿಕ ಪ್ರಶಾಂತಿಯಿಂದ ಸಾಧ್ಯ. ಭಕ್ತಿಯ ವಿಕಾಸ ಭಗವಂತನಲ್ಲಿಯ ಅನುರಕ್ತಿಯಿಂದ ಸಾಧ್ಯ. ಆತ್ಮ ವಿಕಾಸ ನಿಜ ಜ್ಞಾನ

ದಿಂದ ಸಾಧ್ಯ. ಜ್ಞಾನದ ವಿಕಾಸ ಅಭ್ಯಾಸಬಲದಿಂದ ಸಾಧ್ಯ. ವೈರಾಗ್ಯ ವಿಕಾಸ ವಿಷಯ ಸುಖಗಳಿಗೆ ಎಡೆಗೊಡದಿರುವುದರಿಂದ ಸಾಧ್ಯ. ಮಾನಸಿಕ ಅಶಾಂತಿಯು ವಿಕಾಸ ದೇಹಾಭಿಮಾನದಿಂದ ಸಾಧ್ಯ. ಧರ್ಮದ ವಿಕಾಸ ದಯದಿಂದ ಸಾಧ್ಯ. ಮುಕ್ತಿ ಸಂಪತ್ತಿನ ವಿಕಾಸ ಸದ್ಗುಣಗಳ ಸಾಧನದಿಂದ ಸಾಧ್ಯ. ಸಮಾಜದ ವಿಕಾಸ ಧಾರ್ಮಿಕ, ಅರ್ಥಿಕ, ಸಾಮಾಜಿಕ ಸಮತೆಯಿಂದ ಸಾಧ್ಯ. ಮಾನಸಿಕ ಶಾಂತಿಯ ವಿಕಾಸ ನಿಸ್ವಾರ್ಥತೆಯಿಂದ ಸಾಧ್ಯ. ಹೃದಯದ ವಿಕಾಸ ಮನೋಶೀಲ ಸಂವರ್ಧನೆಯಿಂದ ಸಾಧ್ಯ. ಎಲ್ಲದರ ವಿಕಾಸ ಮನೋಬಲದಿಂದ ಸಾಧ್ಯ.





# ಎಲರ್ಜಿ (ರಕ್ತನಂಜು)

ಡಾ|| ಎಲ್. ಆರ್. ಶೆಗಡೆ

ಹಲವು ರೀತಿಯ ಚರ್ಮ ರೋಗಗಳಿಗೂ, ಥಂಡಿ, ಗಂಟಲ ನೋವು ಕೆಮ್ಮು ದಮ್ಮು, ಹೊಟ್ಟೆಶೂಲೆ, ಅತಿಸಾರ ಮುಂತಾದ ವ್ಯಾಧಿಗಳಿಗೂ ತಳಹದಿಯಾಗಿಯೂ ಇನ್ನು ಹಲವು ವ್ಯಾಧಿಗಳನ್ನು ಕೆರಳಿಸುವಂಥದಾಗಿಯೂ ಉದಾ: ಸಂಧಿವಾತ(ರಕ್ತ ನಂಜಾಗುವ ವಸ್ತುಗಳ ಸೇವನೆಯಿಂದ ಉಲ್ಬಣವಾಗುವುದು) ಕೆಲವು ಔಷಧಗಳ ಉಪಯೋಗ ಮಾತ್ರದಿಂದ ಮರಣವನ್ನು ತರುವಂಥ ಸಾಧ್ಯತೆಯುಳ್ಳದಾಗಿಯೂ ಇರುವ ಈ ರಕ್ತನಂಜು ಆಧುನಿಕ ಕಾಲದಲ್ಲಿ ಬಹು ವಿಸ್ತಾರವಾಗಿ ಹರಡುತ್ತಿದೆ. ರಕ್ತನಂಜು, ಒಂದು ವಸ್ತುವಿನಿಂದ ಎಲ್ಲರಿಗೂ ಒಂದೇ ಬಗೆಯಾದ ಪರಿಣಾಮವಲ್ಲ. ವಿಶಿಷ್ಟ ವಸ್ತುವು, ವ್ಯಕ್ತಿಗಳು ಕೆಲವರಲ್ಲಿ ಮಾತ್ರ ವಿಪರೀತ ಪರಿಣಾಮ ಮಾಡುವುದೇ ರಕ್ತನಂಜು. ಒಬ್ಬನ ಆಹಾರ ಇನ್ನೊಬ್ಬನ ವಿಷವಾಗಬಹುದು ಎಂಬರ್ಥವುಳ್ಳ ಆಂಗ್ಲ ಗಾದೆ ಇಲ್ಲಿ ತುಂಬಾ ಸತ್ಯವಾಗಿ ಕಾಣುತ್ತದೆ. ಪೆನ್‌ಸಿಲ್ ಇಂಜೆಕ್ಷನ್ ಹಲವರಿಗೆ ರಕ್ತನಂಜನ್ನುಂಟು ಮಾಡದು. ರಕ್ತನಂಜು ಉಂಟಾದರೂ ಎಲ್ಲರಿಗೂ ಒಂದೇ ಬಗೆಯ ಪರಿಣಾಮವಾಗದು. ಕೆಲವರಿಗೆ ಚರ್ಮದಲ್ಲಿ ರಕ್ತನಂಜಿನ ಗುಳ್ಳೆಗಳು ಮಾತ್ರ ಆಗಿ ತುರಿಕೆಯಿಂದ ತ್ರಾಸಾದರೆ ಕೆಲವರು ಇಂಜೆಕ್ಷನ್ ಕೊಟ್ಟ ಎರಡು ಮೂರು ನಿಮಿಷಗಳಿಗೆ ಮರಣ ಹೊಂದುತ್ತಾರೆ (ಎರಡನೇ ಸಲ ಮುನ್ನೆಚ್ಚರಿಕೆ ಕ್ರಮ ಕೈಕೊಳ್ಳದಿದ್ದರೆ ಮಹಾ ಘಾತಸಂಭವ)ಅನಾನಸ್ ತಿಂದರೆ, ಕೆಲವರಿಗೆ ಮೋರೆ, ಮೈಕೈ ಬಾತುಕೊಳ್ಳದಿದ್ದರೆ, ಬಹುಸಂಖ್ಯೆಯ ಜನರಿಗೆ ಹೀಗೆನಾಗದು.

ಅತ್ಯುತ್ತಮ ಆಹಾರಸತ್ವವಾದ ಜೇನುತುಪ್ಪವು ಅದರಲ್ಲಿನ 'ಬಿ' ಅನ್ನಾಂಗದ ಮೂಲಕ ರಕ್ತನಂಜಿಗೆ ಗುಣಕಾರಿಯೆಂದು ತಿಳಿದಿದ್ದಾರೆ. ಆದರೆ ಕೆಲವರಿಗೆ ಜೇನುತುಪ್ಪದಿಂದ ರಕ್ತನಂಜು ಕೆಣಕಿ ರಕ್ತನಂಜಿನ ಚರ್ಮರೋಗ ಹೆಚ್ಚಾಗಬಹುದು. ಜೇನು ಲಂಬು ಬಿಟ್ಟು, ಜೇನು ವಿಷ ಶರೀರಕ್ಕೆಸೇರಿದ ಪರಿಣಾಮದಲ್ಲಿಯೂ ತುಂಬ ವ್ಯತ್ಯಾಸಗಳಿವೆ. ಚುಚ್ಚಿದಸ್ಥಳದಲ್ಲಿ ತೀರ ನೋವು ಬೀಗು ಬರಬಹುದು. ಚುಚ್ಚಿದ್ದು ಪುನಃ ಪುನಃರೂಢಿಯಾದರೆ, ಆಮೇಲೆ ಜೇನುವಿಷದ ಪರಿಣಾಮವನ್ನು ನಿರೋಧಿಸುವ ಶಕ್ತಿ ಬರುತ್ತದೆ.

ನಳವಾಯು (Colie) ಉಪದ್ರವದಿಂದ ಬಳಲುವ ಒಬ್ಬರಿಗೆ ಕುಚ್ಚಿಗೆ ಅಕ್ಕಿಯ ಅನ್ನ ಹೊಟ್ಟೆ ಸೇರಿದರೆ, ಭಯಂಕರ ಶೂಲೆ ಬಂದು ನೆಲದ ಮೇಲೆ ಬಿದ್ದು ಹೊರಳಾಡುತ್ತ

ತಡೆಯಲಾರದ ನೋವಿನಿಂದ ಕೂಗುತ್ತಿದ್ದರು. ಕಚ್ಚಿಗೆ ಅಕ್ಕಿಯ ಜೀರ್ಣಕ್ಕೆ ಹಗುರವಾಗಿದ್ದು, ಚೀನೆಯವರ ಆಹಾರವೆಂದು ಪ್ರಸಿದ್ಧ ಪಡೆದಿದೆ. ಈ ದುರ್ದೈವಿಯ ಹೊಟ್ಟೆಯ ನರಗಳಿಗೆ ಅದು ವಿಷಪರಿಣಾಮಿಯಾಯಿತು.

ಗಂಟಲು ಮೊಳೆ, ಟಾನ್ಸಿಲ್ ಉಲಿಯೂತವನ್ನು ಕರಿದ ಪದಾರ್ಥವನ್ನು ತಿನ್ನೋಣವು ಕೆಣಕಿ ಈ ಶೀತ ಕಡಿಮೆಯಾಗಿದ್ದರೂ ಉಲ್ಬಣವಾಗುವಂತೆ ಮಾಡುತ್ತದೆ. ಕರಿಬಾಳೆಹಣ್ಣು ತಿಂದರೆ ಗಂಟಲು ನೋವು ಮರುಕಳಿಸಬಹುದು. ಥಂಡಿ, ಕಫ, ಕರಿದ ವಾಸನೆ ಬಂದರೂ ಸಾಕು ಹೆಚ್ಚಾಗುವುದು. ಬಹಳ ಜನರಿಗೆ ಅನುಭವದಲ್ಲಿರುವ ವಿಷಯ. ಆದರೆ ಮುಂಬಯಿಯಲ್ಲಿನ, ನನ್ನ ಹಿರಿಯ ಅಳಿಯನ ಮಿತ್ರನೊಬ್ಬನು ಥಂಡಿ, ಕಫ ಆದಾಗ, ಚಹದಂಗಡಿಗೆ ಹೋಗಿ, ಎರಡು ಭಜ್ಜಿ ಪ್ಲೇಟ್‌ಗಳಿಗೆ ಆರ್ಡರ ಕೊಡುತ್ತಾನೆ. ಎರಡು ಪ್ಲೇಟ್ ಭಜ್ಜಿ ತಿಂದ ಮೇಲೆ, ಅವನ ಥಂಡಿ ಮಂಗಮಾಯ. ಅವನಿಗೆ ಅದೇ ಔಷಧ. ಥಂಡಿಗೆ ಅದೇ ರಾಮಬಾಣ. ಚಹದಂಗಡಿಯೇ ಅವನ ಆಸ್ಪತ್ರೆ. (ಈ ರೋಗ ಚಿಕಿತ್ಸೆಯಲ್ಲಿ.)

ಕಡೆದ ಮಜ್ಜಿಗೆಯೂ। ಆದರಲ್ಲಿಯೂ ಆಕಳ ಮಜ್ಜಿಗೆ ವಿಶೇಷವಾಗಿ ಅನಂತ ರೋಗಗಳನ್ನು ನಿವಾರಿಸುವ ಭೂಲೋಕದ ಅಮೃತವೆಂದು ಹೊಗಳುತ್ತಾರೆ. ಮಿತಿಮೀರಿದ ತುಪ್ಪ ತಿಂದು ಅಜೀರ್ಣವಾದವರಿಗೆ (ಪರಿಸ್ಥಿತಿಯ ವ್ಯತ್ಯಾಸದಿಂದ. ಕಾಲ ಮಹಿಮೆಯಿಂದ ಈಗ ಅಂಥವರ ಸಂಖ್ಯೆ ಕಡಿಮೆಯಾದುದು ಒಳ್ಳೆಯದಾಯಿತು. ಯಾಕೆಂದರೆ ಈಗ ಈ ಭೂಲೋಕದ ಅಮೃತವು ಬೆರಿಕೆ ವಸ್ತುಗಳ ಸಹಯೋಗದಿಂದಲೂ ಕಾಫಿ ಕುಡಿವವರು ಹೆಚ್ಚಾದುದರಿಂದೂ ದುರ್ಲಭವಾಗಿದೆ. ಜ್ವರಗಡ್ಡೆಯನ್ನು ಕರಗಿಸುವ ಮಜ್ಜಿಗೆ ದುರ್ಮಿಳವಾಗುತ್ತಿದ್ದರೂ ಒಂದು ರೀತಿಯಿಂದ ಚಿಂತೆ ಪರಿಹಾರ. ಯಾಕಂದರೆ, ಗಂಡಸರಿಗೆ ಎಂಟೋ ಒಂಬತ್ತೋ ತಿಂಗಳು ತುಂಬಿದ ಹಾಗೆ ಕಾಣುವಂತೆ ಮಾಡುವ ಮಲೇರಿಯಾದ ಜೊತೆಗೆ ಕಾಲು ಕಿತ್ತಿದೆ.) ಕೆಲವು ದಿನ ಮಜ್ಜಿಗೆ ಸೇವಿಸಿದರೆ ಗುಣವಂತೆ.

ವಿಶೇಷವಾಗಿ ಕೊಬ್ಬು ಬೆಳೆದು ಊದಿಕೊಂಡಿದ್ದುದು ಕಡೆದ ಮಜ್ಜಿಗೆಯ ಪಾನದಿಂದ ತೆಳ್ಳಗಾಗುತ್ತದೆ ಎನ್ನುತ್ತಾರೆ. ಇದು ಮಾತ್ರ ಅನುಮಾನಸ್ಪದ. ವಿಶೇಷವಾಗಿ ಕೊಬ್ಬನ್ನು ಬೆಳೆಸಿಕೊಂಡ ಮಹೋದಯ [ಮಹೋದಯರ] ಮಹೋದರರ ನಮ್ಮ ದೇಶದ [ಭಾ. ರ. ಪ] ಜನಸಂಖ್ಯೆಯಂತೆ ಬೆಳೆಯುತ್ತಲೇ ಇರುತ್ತದೆ. ಅವರಿಗೆ ಬಹುಶಃ ನಮ್ಮ ಖಾನಾವಳಿ ಮತ್ತು ಹೋಟೆಲುಗಳಲ್ಲಿ ದೊರೆಯುವ ಅಗ್ಗವಲ್ಲದ ತಿಳಿಮಜ್ಜಿಗೆಯ ರುಚಿ ಗೊತ್ತಾಗಿಲ್ಲದುದೇ ಕಾರಣ. ಮನೆಯಲ್ಲಿ ಅವರಲ್ಲಿ ಬಹುಜನರಿಗೆ ಕಡೆದ ಮಜ್ಜಿಗೆ ಕುಡಿದ ಅಭ್ಯಾಸವಿಲ್ಲ.



ಆದರೆ, ಇಂಥ ಮಜ್ಜಿಗೆ ಹೊಟ್ಟೆಯನ್ನು ಸೇರಿದರೆ ಚಡಪಡಿಸಿ ಒದ್ದಾಡುವಶೂಲೆ ರೋಗ ಪೀಡಿತರೂ ಇರುವರೆಂದರೆ, ಪ್ರಕೃತಿಯ ವಿಕೃತಿಯನ್ನು ಏನೆಂದು ಕೊಂಡಾಡೋಣ ?

ಆದರೆ, ಇದಕ್ಕೆಲ್ಲ, ಬುದ್ಧಿವಂತರಾದ ಆಂಗ್ಲರ ಡೆಮಾಕ್ರಟಿ ಎಂಬ ಶಬ್ದಕ್ಕಿಂತಲೂ ಈಡಿಯೊಸಿಂಕ್ರಸಿ (ವಿಶಿಷ್ಟ, ವಿಚಿತ್ರ ಪ್ರಕೃತಿ) ಎಂಬ ಇನ್ನು ದೊಡ್ಡ ಹೆಸರನ್ನು ಕೊಟ್ಟಿದ್ದಾರೆ.

ಕೆಲವರಿಗೆ ಅವರು ಸಾಕಿದ ನಾಯಿ, ಬೆಕ್ಕು, ಮುಂತಾದ ಪ್ರಾಣಿಗಳ ಸಾನಿಧ್ಯ ಸಾಹಚರ್ಯ ಅಲರ್ಜಿಯಾಗಿ ಅವರಿಗೆ ದಮ್ಮಿನ ಸಂಕಟವಾಗುತ್ತದೆ. ಒಬ್ಬ ಮುದುಕಿಯ ಅನುಭವ ಇನ್ನೂ ವಿಚಿತ್ರವಾಗಿದೆ. ಅವಳ ಮದುವೆಯಾದ ಮೇಲೆ, ಅವಳಿಗೆ ಮೊದಲು ಇಲ್ಲದ ದಮ್ಮಿನ ರೋಗ ಪೀಡೆ ಕೊಡಹತ್ತಿತು. ಗಂಡನು ತೀರಿ, ಅವನ ಹೆಣವನ್ನು ಮನೆಯಿಂದ ಸಾಗಿಸಿದ ಮೇಲೆ, ಅಂದಿನಿಂದಲೇ ಅವಳ ದಮ್ಮು ಪೂರ್ಣ ಗುಣವಾಯಿತು. ಯಾವ ಔಷಧದ ಅಗತ್ಯವಿಲ್ಲದೆಯೇ ಆರಾಮವಾಯಿತು. ಅವಳಿಗೆ ಅವಳ ಗಂಡನೇ ಅಲರ್ಜಿಯನ್ನುಂಟು ಮಾಡಲು ಕಾರಣ.

1. ಆರೋಗ್ಯದರ್ಪಣ-ಪುಟ ೩೧೯.

ಯಾರಿಗೆ ಯಾವುದರಿಂದ, ಯಾರಿಂದ, ಅಲರ್ಜಿ ಆಗುವುದೆಂದು ಮೊದಲೇ ತಿಳಿಯುವುದಿಲ್ಲ. ಬಾಳೆಹಣ್ಣು, ಟೊಮೋಟೊ (ಕಾಯಿ, ಹಣ್ಣು) ತತ್ತಿ ಮೀನು (ಒಯ್‌ಸ್ಟರ್‌ದಂಥ ಮೀನು) ಏಡಿ ಮುಂತಾದ ಆಹಾರ ಪದಾರ್ಥಗಳು ಸಾಮಾನ್ಯವಾಗಿ ಅಲರ್ಜಿಯನ್ನುಂಟು ಮಾಡುವವೆಂದು ತಿಳಿಯಲಾಗಿದೆ. [ಆದರೂ ಎಲ್ಲರಿಗೂ ಅಲ್ಲ.

ಇನ್ನು ಕೆಲವು ವಸ್ತುಗಳು ಕೆಲವರಿಗೆ ಮಾತ್ರ ವಿಪರೀತ ತೊಂದರೆ ಕೊಡುತ್ತವೆ. ಗೋಧಿಯನ್ನು ಸೇವಿಸಿದರೆ ಕೆಲವರಿಗೆ ಇಸಬು ಉಂಟಾಗುತ್ತದೆ. ಕೆಲವರಿಗೆ ಕೊಬ್ಬು ಅಥವಾ ಎಣ್ಣೆ ತಿಂದರೆ ಪಿತ್ತವಿಕಾರವುಂಟಾಗುತ್ತದೆ. ಉಳ್ಳಾಗಡ್ಡೆಯನ್ನು ತಿಂದರೆ ವಿಷ ತಿಂದಂತಾಗಿ ಒದ್ದಾಡಿಕೊಳ್ಳುವವರನ್ನು ಕಾಣಬಹುದು. ಕೆಲವರಿಗೆ ಸಕ್ಕರೆಯಿಂದ ಅಲರ್ಜಿಯಾಗಿ ಕಷ್ಟ. ಧೂಳಿಯಲ್ಲಿರುವ ಸಣ್ಣ ಹುಳು (mite) ಗಳಿಂದಲೆ ಹಲವರಿಗೆ ದಮ್ಮು, ಕೆಮ್ಮು, ಸೀನು, ಉಂಟಾಗುತ್ತವೆ. ಅಲರ್ಜಿ ಚರ್ಮರೋಗ ಆಗಬಹುದು.

ಕೃತಕ ನೂಲು ಕೂದಲಿಗೆ ಹಚ್ಚುವ ರಾಸಾಯನಿಕ ಬಣ್ಣ, ಮತ್ತು ಇತರ ಅಲಂಕಾರ (Cosmetics) ಸಾಧನಗಳು, ಡಬ್ಬಗಳಲ್ಲಿ ಹಾಕಿ ಬರುವ ಆಹಾರ

ಸಾಮಗ್ರಿ ಆಧುನಿಕ ವೈದ್ಯ ಶಾಸ್ತ್ರದ (ಅಲೋಪಥಿಯ) ಸಿದ್ಧೌಷಧಗಳು, ಕ್ರಿಮಿನಾಶಕಗಳು ಅಲರ್ಜಿಯ ಸಾಮ್ರಾಜ್ಯವನ್ನು ವಿಸ್ತೃತಗೊಳಿಸಿವೆ.

ಸಮಾನ್ಯವಾಗಿ ನಿರುಪದ್ರವಿಯಾದ ಬಿ ಅನ್ನಾಂಗ(ವಿಟಮಿನ್)ದ ಇಂಜಕ್ಷನ್ ಕೊಟ್ಟಮೇಲೆ, ಶಿವಮೊಗ್ಗ ಆಸ್ಪತ್ರೆಯೊಂದರಲ್ಲಿ ಒಬ್ಬ ರೋಗಿ ಮರಣ ಹೊಂದಿದನೆಂದು ಪತ್ರಿಕೆಗಳಲ್ಲಿ ಸುದ್ದಿ ಬಂದುದುಂಟು. ಇದರ ನಿಜವಾದ ಕಾರಣ ಏನೆಂದೂ ಪ್ರಕಟಪಡಿಸಿಲ್ಲ. ಆ ಇಂಜಕ್ಷನ್ ಅವನಿಗೆ ಅಲರ್ಜಿಯಾಗಿತೆಂದು ನಾನು ಊಹಿಸುತ್ತೇನೆ. ಲಿಂಬೆಹಣ್ಣಿನ ರಸವನ್ನು ಪದೇ ಪದೇ ಕುಡಿದು (ಹತ್ತೋ ಹನ್ನೆರಡೋ ಔನ್ಸ್) ಕುಡಿದ ಮೇಲೆ ಒಬ್ಬನು ಪ್ರಾಣಬಿಟ್ಟನು ಎಂದು ಪತ್ರಿಕೆಗಳಲ್ಲಿ ಬಂದ ಸುದ್ದಿ ತುಂಬಾ ಆಶ್ಚರ್ಯಕರವಾಗಿದೆ.

ಅಲೋಪಥಿಚಿಕಿತ್ಸಾಶಾಸ್ತ್ರದಲ್ಲಿ ಎಂಟಿಹಿಸ್ಟಮ್ಯಾನ್ ಚಿಕಿತ್ಸೆಯನ್ನು ಅಲರ್ಜಿಯ ತಾತ್ಕಾಲಿಕ ಪರಿಹಾರಕ್ಕಾಗಿ ಬಳಸುತ್ತಾರೆ. ಅಲರ್ಜಿಗೆ ಕಾರಣವಾದ ವಸ್ತುಗಳನ್ನು ಪತ್ತೆ ಹಚ್ಚಲು ಒಂದೊಂದನ್ನೆ ಸೂಕ್ಷ್ಮ ಪ್ರಮಾಣದಲ್ಲಿ ಚರ್ಮಕ್ಕೆ ಸೇರಿಸಿ, ಮಾಡುವ ತಪಾಸಣೆಯಿಂದ ಕ್ರಮೇಣ ಆ ದೋಷಿಯು (Caifrit) ಯಾವ ವಸ್ತು ಎಂದು





ಕಂಡು ಹಿಡಿದು ಅದನ್ನು ಬಿಡಲು ಸೂಚಿಸುತ್ತಾರೆ. ಈ ಪರೀಕ್ಷೆಯಲ್ಲಿ ತಿಳಿವುದಾದರೂ ಆ ವಸ್ತುಗಳನ್ನು ತ್ಯಜಿಸುವುದು ಅನೇಕ ಸಲ ಕಷ್ಟವಾಗುತ್ತದೆ. ಮನೆಯ ಧೂಳಿನ ಹುಳಗಳನ್ನು ಕೊಲ್ಲುವುದಕ್ಕೆ ಫಿನಾಯಿಲ್ ಮುಂತಾದುವನ್ನು ನೀರಿಗೆ ಸೇರಿಸಿ ನೆಲವನ್ನು ಉಜ್ಜಬಹುದು. (ಅವೇ ಅಲರ್ಜಿಯಾದರೆ ?)

ಆದರೆ ವಾತಾವರಣದ ಕಶ್ಮಲಗಳನ್ನು ತೆಗೆವುದು ಸುಲಭವಲ್ಲ. ಹವೆಯನ್ನು ಬದಲಾಯಿಸಲು ದೂರದ ಅನುಕೂಲಕರ ಹವೆಯ ಜಾಗಕ್ಕೆ ಹೋಗಿ ನೆಲಸುವುದರಿಂದಲೇ ಪ್ರಯೋಜನವಾಗುವುದುಂಟು. ಆದರೆ, ಇದು ಎಷ್ಟು ವ್ಯಾವಹಾರಿಕವಾಗಬಹುದು ? ಮೋಡ ತುಂಬಿದ ವಾತಾವರಣವೇ ಕೆಲವರ ದಮ್ಮು ಕೆರಳಲು ಕಾರಣ. ಮೋಡಗಳು ಇಲ್ಲದ ಆಕಾಶವನ್ನು ಪೃಥ್ವಿಯಲ್ಲಿ ಹುಡುಕಿಕೊಂಡು ಹೋಗುವುದು ಕಷ್ಟ.

ಹವೆಯಿಂದ ಹಬ್ಬುವ (AIRBOARNE) ಚರ್ಮರೋಗವು ಅಲರ್ಜಿಯ ಮೂಲಕವೇ ತ್ರಾಸು ಕೊಡುತ್ತದೆ. ಇತ್ತೀಚೆಗೆ, ಈ ಹಬ್ಬು ಅಲರ್ಜಿಗೆ ಪಾರ್ಥೇನಿಯಂ ಎಂಬ ಸಸ್ಯದ ಬೆಳವಣಿಗೆ ಸಹ ಕಾರಣವೆಂದು ಡಾ|| ಪಾಲ್ ನೀಲಂಕ್‌ವಿಲ್ ಎಂಬುವರು ಬರೆದಿದ್ದಾರೆ (ಪತ್ರ–ಡೆಕ್ಕನ್ ಹೆರಾಲ್ಡ್) 4–11–82

ಈ ಸಸ್ಯಕ್ಕೆ ಕಾಂಗ್ರೆಸ್ ಹುಲ್ಲು ಎಂದು ಹೆಸರು ಬಿದ್ದುಹೋಗಿದೆ. ಇದಕ್ಕೆ ಕಾರಣವೇನೋ ತಿಳಿಯದು ಇದು ಕಾಂಗ್ರೆಸ್ ಹುಲ್ಲಾದರೆ, ಜನತಾ, ಬಿ ಜೆ ಪಿ, ಕ್ರಾಂತಿರಂಗ ಮುಂತಾದ ಪಕ್ಷಗಳವರಿಗೆ ಮಾತ್ರ ಅಲರ್ಜಿಯನ್ನುಂಟು ಮಾಡಬೇಕಾಗಿತ್ತು. ಆದರೆ, ವಸ್ತುಸ್ಥಿತಿ ಇರುವಂತೆ ಕಾಣದು ಎಂದು ನಮ್ಮ ಅನುಮಾನ (ಅನುಮಾನ ಎಂದು ಬರೆದುದೇಕೆಂದರೆ, ಕೆಲವು ಕಟ್ಟಾ ವಿರೋಧಿಪಕ್ಷಗಳ ಧುರೀಣರಿಗೆ ಸಹ ಇದರಿಂದ ಅಲರ್ಜಿಯಾಗಿದ್ದಿರಲೇ ಬೇಕು! ಈ ಪಾರ್ಥೇನಿಯಂ ಕಳೆಯನ್ನು ಸಮೂಲವಾಗಿ ತೆಗೆದು. ನಿರ್ಮೂಲಗೊಳಿಸಲು ವಿರೋಧಿಪಕ್ಷಗಳವರೆಲ್ಲರೂ ಬಿಕ್ಕಟ್ಟಾಗಿ ಒಂದು ಕಡೆಗಾದರೂ ಕಾರ್ಯಪ್ರವೃತ್ತರಾಗುವ ಚಿಹ್ನೆ ಸದ್ಯಕ್ಕಂತೂ ಕಾಣಿಸುವುದಿಲ್ಲ.

ಪಾರ್ಥೇನಿಯಂ ಸಸ್ಯಗಳ ಹಾವಳಿಯಿಲ್ಲದ ಜಾಗಕ್ಕೆ ರಜಾದಿನಗಳಲ್ಲಿ ಹೋಗಿ ಉಳಿದ ರೋಗಿಗಳಿಗೆ ಅಷ್ಟುದಿನ ಈ ಶನೀಶ್ವರನ ಕಾಟ ತಪ್ಪಿ ಆರಾಮಾಗಿ ಕಾಲಕಳೆದು ಬಂದ ಅನುಭವವಿದೆಯಂತೆ.

ಹೆದರಿಕೆ, ಅಲ್ಲದೆ, ಮಾನಸಿಕವಾದ ಚಿಂತೆಯ ಒತ್ತಡಗಳು ಕಾರಣವಾಗಿ ಉಬ್ಬಸ ಉಂಟಾಗುವುದೆಂದು ಕಂಡು ಬಂದಿದೆ ನಾಲ್ಕು ವರ್ಷ ವಯಸ್ಸಿನ ಒಬ್ಬ ಹುಡುಗನಿಗೆ ಅವನ ತಂದೆ–ತಾಯಿಗಳು ಹತ್ತಿರ ಇಲ್ಲದೆ ಹೋದರೆ ಭಯ ಭೀತಿಯುಂಟಾಗಿ ಉಬ್ಬಸದ

ಪೀಡೆಯಾಗುತ್ತಿತ್ತಂತೆ. ಅದೂ ವಿಶೇಷವಾಗಿ ರಾತ್ರಿಕಾಲದಲ್ಲಿ. ಇದನ್ನು ತಿಳಿದ ಅವನ ತಂದೆ-ತಾಯಿಗಳು ಅವನನ್ನು ರಾತ್ರಿ ಕಾಲದಲ್ಲಿ ಅಗಲದೆ ಅವನ ಬಳಿಯಲ್ಲಿಯೇ ಉಳಿದ ಮಾತ್ರದಿಂದಲೇ ಅವನ ಉಬ್ಬಸ ಗುಣವಾಯಿತೆಂದು ದಿಲ್ಲಿಯ ಡಾ॥ ಮುಕೇಶ ಬಾಟ್ರಾ ಎಂಬ ಹೋಮಿಯೋಪಥಿಯ ತಜ್ಞರು ಬರೆದಿದ್ದಾರೆ.

ಕಫವು ಗಟ್ಟಿಯಾಗುವುದರಿಂದಾಗಲಿ, ಶ್ವಾಸನಾಳದ ನಲಿಕೆಗಳು ಅಲರ್ಜಿಯಿಂದಾಗಲಿ ಉಂಟಾಗುವ ದಮ್ಮಿಗೆ ನಮ್ಮ ಅಲೊಪಥಿ ಡಾಕ್ಟರ ಮಹಾಶಯರು ಮಕ್ಕಳ ಆಟಿಗೆಯಂಥ ವರ್ತುಲಾಕಾರದ ಪಂಪ್‌ನಲ್ಲಿ ಔಷಧದ ಗ್ಯಾಸ್ ತುಂಬಿ ಅದನ್ನು ಹಿಡುದು ಮೂಗಿನ ಹತ್ತಿರ ಹಿಚುಕುತ್ತಿದ್ದು ಆದರ ಗ್ಯಾಸ್ ಮೂಗಿನೊಳಕ್ಕೆ ಹೋದ ಮಾತ್ರದಿಂದಲೇ ತಾತ್ಕಾಲಿಕವಾಗಿ ಆ ಉಬ್ಬಸದ ಒತ್ತಡ ಕಡಿಮೆಯಾಗುವಂಥ ಉಪಾಯವನ್ನು ಕಂಡು ಹಿಡಿದಿದ್ದು, ಅದು ಕೆಲವರಿಗೆ ಉಪಯುಕ್ತವೆಂದು ಕಂಡು ಬಂದಿದೆ.

ಇದರಂತೆ ಕೆಲವರಿಗೆ ತಾತ್ಕಾಲಿಕ ಶಮನಕ್ಕೆ ಹಳ್ಳಿಮದ್ದು ಉಮ್ಮತ್ತದ ಒಣಎಲೆಗಳ ಬೀಡಿ ಪ್ರಯೋಗ. ಈ ಎಲೆಗಳನ್ನು ದಂಟು ಸಮೇತ ಒಣಗಿಸಿ, ಹೊಗೆಸೊಪ್ಪಿನಂತೆ ಕೊಳವೆಯಲ್ಲಿ ಹಾಕಿ ಸೇದುವುದರಿಂದ ಉಬ್ಬಸ ಅನೇಕ ಸಾರಿ ಶಮನವಾಗುತ್ತದೆ. ಕೆಲವರಿಗೆ ಆ ಪ್ರಕಾರ ಸೇದಿದ ಕೂಡಲೆ ಗುಣವಾಗುತ್ತದೆ. ಬೇರೆ ಕೆಲವರಿಗೆ ಅದರಿಂದ ಪರಿಣಾಮವಾಗದಿರುವುದುಂಟು. ಎಲೆಗಳಿಂದ ಗುಣ ಬಾರದಿದ್ದರೆ, ಬೀಜಗಳನ್ನು ಜಜ್ಜಿ ಕೊಳವೆಯಲ್ಲಿ ಹಾಕಿ ಅವುಗಳ ಹೊಗೆಯನ್ನು ಸೇದುವುದು ಹೆಚ್ಚು ಉತ್ತಮ ಎನ್ನಲಾಗಿದೆ. (ಇದು ಉಕಾಷಧಿಗಳ ಪ್ರಯೋಗ ಎಂಬ ಗ್ರಂಥದಲ್ಲಿ ತಿಳಿಸಿದ್ದು) ಪ್ರಾರಂಭದಲ್ಲಿ ಎಲೆ ಬೀಜಗಳ ಒಣಗಿದ ಚೂರುಗಳನ್ನು ಹತ್ತಿಪ್ಪತ್ತು ಗ್ರೇನ್ ಹಾಕಿ ಸೇದುವುದು ಕ್ರಮೇಣ ಹೆಚ್ಚಿಸಿ, ಮೂವತ್ತು ಗ್ರೇನ್‌ವರೆಗೆ ಹಾಕಿ ಸೇದುವುದು. ವಾಕರಿಕೆ ಮುಂತಾದ ತೊಂದರೆಗಳಾದರೆ ಸೇದುವುದನ್ನು ಕೂಡಲೇ ಬಿಡಬೇಕು.

ಅಲೋಪಥಿಯ ಸಂಶೋಧಕರು ತುಂಬಾ ಬುದ್ಧಿವಂತರು. ಅವರು ರೋಗದ ಉರುಬೆಯನ್ನು ತಾತ್ಕಾಲಿಕವಾಗಿ ಶಮನ ಮಾಡುವ ಹಲವು ಮದ್ದುಗಳನ್ನು ಕಂಡು, ಪುನಃ ರೋಗಿ ತಮ್ಮ ಬಳಿಗೇಬರುವಂತೆ ಉಪಾಯದಿಂದ ಮದ್ದುಗಳನ್ನು ಸಂಯೋಜನೆ ಮಾಡುವಲ್ಲಿ ನಿಪುಣರು. ಇದರಿಂದ ರೋಗಿಗೂ ಡಾಕ್ಟರರಿಗೂ ಅವಿನಾಭಾವಿಯಾದ ಸಾಹಚರ್ಯ ಏರ್ಪಡಲು ಅನುಕೂಲ.

ಇದರಿಂದಾಗಿ ದಮ್ಮಿನ ರೋಗಿಗಳು ಯಾವಜ್ಜೀವ ಪುನಃ ಪುನಃ ದಿನದಿನಕ್ಕೆ ಗುಣದ ಅಸಂಹವನ್ನು ಅನುಭವಿಸುತ್ತಿರಲು ಸಾಧ್ಯವಾಗುತ್ತದೆ.



ಹೋಮಿಯೋಪಥಿಯ ಪ್ರಕಾರ ರೋಗದ ಮೂಲವನ್ನು ಕಂಡುಹಿಡಿದು ಔಷಧ ಸಂಯೋಜನೆ ಮಾಡುವ ಕ್ರಮದಲ್ಲಿ ಒಮ್ಮೊಮ್ಮೆ ತಾತ್ಕಾಲಿಕ ಶಮನದೊರಕದೆ, ಪೀಡೆ ಅತಿಶಯವಾಗಿ ರೋಗಿ ಈ ಔಷದಗಳನ್ನು ಮುಂದುವರಿಸುವುದು ಕಷ್ಟವಾಗುತ್ತದೆ ಆದರೆ, ತಜ್ಞಡಾಕ್ಟರರು ಸರಿಯಾಗಿ ಔಷಧಗಳನ್ನು ಆಯ್ಕೆಮಾಡಿ ಕೊಟ್ಟಿದ್ದಾರೆ. ರೋಗ ಸಮೂಲವಾಗಿ ನಾಶಹೊಂದುತ್ತದೆ ಇದು ನಿಶ್ಚಯ.

ಹಲವು ಔಷಧಗಳ ಗುಣಪರಿಚಯವಿದ್ದರೂ ಇಲ್ಲಿ ಹಾಗೆ ವಿಸ್ತರಿಸಿ ಹೇಳುವುದು ರೋಗಿ ಸ್ವಂತ ಪ್ರಯೋಗಮಾಡಿಕೊಂಡು, ಕೆಲವು ಸಲ ತೊಂದರೆಯನ್ನು ಹೆಚ್ಚು ಮಾಡಿಕೊಳ್ಳಲು ಕಾರಣವಾಗುವುದರಿಂದ ತಿಳಿಸುವುದು ಕಷ್ಟ. ನಾಲ್ಕು ಪ್ರಕಾರಗಳ ದಮ್ಮಿನಲ್ಲಿ ಕಫದ ದಮ್ಮು (BRONCHIAL ASTHMA) ನರಸಂಬಂಧವಾದ ದಮ್ಮು (NERVOUS ASTHMA) ಅಜೀರ್ಣ ವಾಯುಸಂಬಂಧವಾದ ಉದರಶ್ವಾಸ (STOMACH ASTHMA) ಮತ್ತು ಹೃದಯದ ದಮ್ಮು (CARDIAC ASTHMA) ಎಂಬುವು ಇವೆ. ಇವನ್ನು ತಿಳಿಯದಿರುವವರು ಚಿಕಿತ್ಸೆ ಮಾಡಿಕೊಳ್ಳುವುದು ಕಷ್ಟ. ಕಫದ ದಮ್ಮಿಗೆ ಔಷಧ ಸೇವಿಸಿದರೆ ( ಅಥವ ಕೊಟ್ಟರೆ ) ಹೃದಯದ ದಮ್ಮಾದರೆ ರೋಗ ಉಲ್ಬಣವಾಗುವ ಸಂಭವ ಹೆಚ್ಚು

ಯಾವುದೇ ರೋಗದಲ್ಲಿಯಾಗಲಿ ಅಥವಾ ಇತರ ಮಾನಸಿಕಚಿಂತೆ ಇತ್ಯಾದಿಗಳಲ್ಲಿಯಾಗಲಿ ಯೋಗಸಾಧನೆಯಿಂದ ತುಂಬ ಪ್ರಯೋಜನವಾಗುತ್ತದೆ. ಇದರಲ್ಲಿ ಪದ್ಧತಿಯ ಪ್ರಕಾರ ವ್ಯಾಯಾಮ ಮಾಡುವುದೂ ಧ್ಯಾನಯೋಗ ಸಹಾ ಉಂಟು. ಇಂಥ ಚಿಕಿತ್ಸೆಯ ತರಬೇತಿಯನ್ನು ಕೊಟ್ಟು ರೋಗಗಳನ್ನು ಗುಣಮಾಡುವ ಒಂದು ಸಂಸ್ಥೆ ಬೆಂಗಳೂರಿನಲ್ಲಿದೆ. ಋಷಿಸಂಸ್ಕೃತಿ ವಿದ್ಯಾಕೇಂದ್ರ, 1763 ಮೊದಲನೆ ಕ್ರಾಸ್, ಎರಡನೇ ಮೆಯಿನ್, ನಾಲ್ಕನೇ ಬ್ಲಾಕ್ ( ಪೂರ್ವ ) ಜಯನಗರ ಬೆಂಗಳೂರು. ಇಲ್ಲಿ ರಕ್ತದ ಒತ್ತಡ, ದಮ್ಮು ಮೊದಲಾದ ದೀರ್ಘಕಾಲೀನ ರೋಗಗಳನ್ನು ಪ್ರಾರಂಭದಲ್ಲಿ ತಜ್ಞ ಡಾಕ್ಟರರ ಔಷಧ ಚಿಕಿತ್ಸೆ ಸಹಿತ ಕೊಡಿಸಿ, ಯೋಗಚಿಕಿತ್ಸೆಯಿಂದ ಗುಣಪಡಿಸುತ್ತಾರೆ. ಪತ್ರಬರೆದು ಅವರೊಡನೆ ಇತರ ವಿವರ ಪಡೆಯಬಹುದು.

ಆಯುರ್ವೇದ ಮತ್ತು ಯುನಾನಿ ಚಿಕಿತ್ಸೆಗಳ ಮೂಲಕವು ರಕ್ತ ನಂಜಿನ ಮೂಲಕವಾದ ಚರ್ಮ ರೋಗ ಮತ್ತು ದಮ್ಮುಗಳನ್ನು ಗುಣಪಡಿಸಬಹುದು. ದಮ್ಮು ಹೊಸದಾಗಿ ಪ್ರಾರಂಭವಾಗಿದ್ದರೆ, ಮತ್ತು ಎಳೆಯ ವಯಸ್ಸಿನವರಿಗಾದರೆ, ಗುಣವಾಗುವ ಸಾಧ್ಯತೆಯಿರುತ್ತದೆ. ಆದರೆ ಈ ಚಿಕಿತ್ಸೆಯಿಂದ ನಿಧಾನವಾಗಿ ಗುಣಕಾಣುತ್ತದೆ.

ಹನ್ನೆರಡು ವರ್ಷ ವಯಸ್ಸಿನ ಒಬ್ಬ ಹುಡುಗನ ತೀವ್ರವಾದ ದಮ್ಮಿನ ರೋಗ

ವನ್ನು ಕಾರ್ಟಿಸೋನ್ ಚಿಕಿತ್ಸೆಯಿಂದ ಹತೋಟಿಗೆ ತರಲಾಗುತ್ತಿತ್ತು. ಈ ಚಿಕಿತ್ಸೆ ಶಮನಕಾರಿ ಮಾತ್ರ. ಆತನ ಪ್ರಕೃತಿಯ ಒಂದು ವಿಚಿತ್ರ ಲಕ್ಷಣವೆಂದರೆ, ಬಟ್ಟೆ ಹಾಕಿಕೊಂಡ ಭಾಗದ ಮೈ ಒಣದಾಗಿದ್ದು, ಹಾಕಿಕೊಳ್ಳದ ಮೈ ಭಾಗದಲ್ಲಿ ಬೆವರು ಬರುತ್ತಿತ್ತು. ಈ ಮುಖ್ಯ ಲಕ್ಷಣದ ಮೇಲೆ ಥೂಜಾ (Thuja) 3x ಎಂಬ ಹೋಮಿಯೋಪಥಿ ಔಷಧವನ್ನು ಕೊಟ್ಟ ಒಂದು ಮಿನಿಟಿಗೆ ತ್ರಾಸು ಇಲ್ಲದಂತಾಗಿ ಆತನು ಅತ್ಯಾನಂದದಿಂದ ನೆಲದಮೇಲೆ ಕೈಯೂರಿ, ಆಚೀಚೆ ಹಾರುತ್ತ, ನನ್ನ ದಮ್ಮು ಗುಣವಾಯಿತು ಎನ್ನುತ್ತಿದ್ದನು.

ಆಮೇಲೆ, ಅವನು ತಂದೆಯ ಸಂಗಡ ಮುಂಬೈಗೆ ಹೋದ ಮೇಲೆ, ಅಲ್ಲಿ ದಮ್ಮು ಬಂದಾಗ, ಆ ಲಕ್ಷಣವಿರಲಿಲ್ಲವೆಂದು ಕಾಣುತ್ತದೆ. ಥೂಜಾ ಪರಿಣಾಮಕಾರಿ ಯಾಗಲಿಲ್ಲ, ಆಮೇಲೆ, ಅವನ ತಂದೆಯವರು ಒಬ್ಬ ಆಯುರ್ವೇದ ವೈದ್ಯರಿಂದ ಚಿಕಿತ್ಸೆ ಮಾಡಿಸಲು ದಮ್ಮು ಸಂಪೂರ್ಣ ಗುಣವಾಯಿತು. (ಮುಂದುವರಿಯುವುದು)





ಮಕ್ಕಳ ಸಾಹಿತ್ಯಕ್ಕೆ

# ವೀರಶೈವ ಸಾಹಿತಿಗಳ ಕೊಡುಗೆ

ಬಿ. ಪಾಂಡುರಂಗರಾವ್

ನಮ್ಮ ದೇಶ ೧೮೫೭-೫೮ ರ ವೇಳೆಗೆ ಸಂಪೂರ್ಣವಾಗಿ ಬ್ರಿಟಿಷ್ ಚಕ್ರಾಧಿ ಪತ್ಯಕ್ಕೆ ಅಧೀನವಾಯಿತು. ಕಾಲಕ್ರಮದಲ್ಲಿ ನಮ್ಮ ದೇಶದಲ್ಲಿ ಪಾಶ್ಚಾತ್ಯ ದೇಶಗಳ ಪ್ರಭಾವದಿಂದ ಜನಜೀವನದಲ್ಲಿ ಮಹತ್ತರ ಬದಲಾವಣೆಯಾಯಿತು. ಶಿಕ್ಷಣದಲ್ಲಿ ಮಾರ್ಪಾಟಾಯಿತು. ಸಮಾಜದಲ್ಲಿ ಸುಧಾರಣೆಯಾಯಿತು. ಜನರಲ್ಲಿ ಜಾಗೃತಿ ಉಂಟಾಯಿತು.

ಹಿಂದಿನಿಂದ ನಡೆದು ಬಂದಿದ್ದ ಶಿಕ್ಷಣ ಪದ್ಧತಿ ಕ್ರಮಬದ್ಧವಾಗಿ ಹೊಸಜಾಡು ಹಿಡಿಯಿತು. ಆಂಗ್ಲಭಾಷೆಯನ್ನು ಕಲಿತ ನಮ್ಮ ಜನ ಆ ಭಾಷೆಯಲ್ಲಿದ್ದ ವೈಪುಲ್ಯಕ್ಕೆ ಮಾರುಹೋದರು. ಆ ಭಾಷಾ ಸಾಹಿತ್ಯದಲ್ಲಿ ಇದ್ದ ವಿಶೇಷಗಳನ್ನು ನಮ್ಮ ದೇಶದ ಭಾಷೆಗಳಲ್ಲಿಯೂ ತಂದು ಕೊಳ್ಳಬೇಕೆಂದು ಆಸೆಪಟ್ಟರು. ಈ ಆಸೆ ಪಠ್ಯಪುಸ್ತಕಗಳ ರಚನೆಯಲ್ಲಿ ಸಾರ್ಥಕ ಪಡೆಯಿತು. ಪ್ರಾಥಮಿಕ ಶಾಲೆಗಳಿಂದ ಮೊದಲುಗೊಂಡು ವಿಶ್ವವಿದ್ಯಾನಿಲಯಗಳವರೆಗೆ ಪಠ್ಯಪುಸ್ತಕಗಳು ವಿದ್ಯಾರ್ಥಿಗಳ ವಯೋಮಿತಿ ಮನೋ ಧರ್ಮಗಳಿಗೆ ಅನುಗುಣವಾಗಿ ರಚಿತವಾದುವು.

ಪ್ರಾಥಮಿಕ ಶಾಲಾ ಮಕ್ಕಳು ನೀರಿಳಿಯದ ಗಂಟಲೊಳ್ ಕಡಬು ತುರುಕಿ ದಂತಾಗಿ ಕ್ಲಿಷ್ಟಕರವಾದ ರೀತಿಯಲ್ಲಿ ಪಾಠ ಪ್ರವಚನ ಮಾಡುತ್ತಿದ್ದರು. ಅವರಿಗೆ ತಾಯಿನುಡಿಗಿಂತ ಹೆಚ್ಚಾಗಿ ಮರಾಠಿ, ಉರ್ದು ಭಾಷೆಗಳಲ್ಲಿ ಪಾಠವಾಗುತ್ತಿತ್ತು. ಏನು ಕಲಿಯುತ್ತಿದ್ದರೋ ಎಷ್ಟು ಕಲಿಯುತ್ತಿದ್ದರೋ ದೇವರೇ ಬಲ್ಲ. ಆಂಗ್ಲ ಪದ್ಧತಿಯ ಶಿಕ್ಷಣ ಪ್ರಾರಂಭವಾದ ಮೇಲೆ ನಮ್ಮ ಮಕ್ಕಳು ಕನ್ನಡದಲ್ಲಿ ಪಾಠ ಕಲಿಯುವ ಪರಿಸ್ಥಿತಿ ಉಂಟಾಯಿತು. ನಮ್ಮ ಮಕ್ಕಳ ಪಾಠಪ್ರವಚನಗಳಿಗೆ ತಕ್ಕಂತೆ ಪಠ್ಯ ಪುಸ್ತಕಗಳ ರಚನೆಯಾಯಿತು. ಪ್ರಾಥಮಿಕ ಶಾಲೆಗಳ ಮಕ್ಕಳ ವಯೋಮಿತಿಗೆ ಮನೋಧರ್ಮಕ್ಕೆ ತಕ್ಕಂತೆ ಪಠ್ಯಪುಸ್ತಕಗಳನ್ನು ಬರೆದರು. ನಮ್ಮ ದೇಶ ಭಾಷಾ ತಜ್ಞರು, ಹಾಗೂ ಮಕ್ಕಳ ಮನೋಧರ್ಮವನ್ನು ಬಲ್ಲ ದೇಶ ಭಾಷಾ ಸಾಹಿತಿಗಳು. ಸಾರಾಂಶ ನಮ್ಮ ಮಕ್ಕಳ ಸಾಹಿತ್ಯದ ಉಗಮ ಪ್ರಾಥಮಿಕ ಶಾಲಾ ಪಠ್ಯ ಪುಸ್ತಕ ಗಳಿಂದ ಎನ್ನಬಹುದು.

" ಹೇಳಿಕೊಟ್ಟ ಪಾಠ, ಕಟ್ಟಿಕೊಟ್ಟ ಬುತ್ತಿ " ಎಲ್ಲಿಯವರೆಗೆ ಬರುತ್ತದೆ ಎಂದು ಪಠ್ಯಪುಸ್ತಕಗಳ ಸಾಧ್ಯಾಸಾಧ್ಯತೆಗಳನ್ನು ಬಲುಬೇಗ ಅರಿತು ಕೊಂಡರು. ಮಕ್ಕಳ ಮನೋಧರ್ಮವನ್ನು ಬಲ್ಲ ನಮ್ಮ ದೇಶ ಭಾಷಾ ಶಿಕ್ಷಣ ತಜ್ಞರು ಹಾಗೂ ಮಕ್ಕಳ ಸಾಹಿತ್ಯಾಭಿಮಾನಿಗಳು, ಪಠ್ಯ ಪುಸ್ತಕಗಳ ' ಬೋರ್ ' ನಿಂದ ನಮ್ಮ ಮಕ್ಕಳನ್ನು ಪಾರು ಮಾಡಲು ಯೋಚಿಸಿದರು. ಪಾಶ್ಚಾತ್ಯ ದೇಶಗಳ ಭಾಷೆಗಳಲ್ಲಿ ಮಕ್ಕಳ ಸಲುವಾಗಿಯೇ ಸಾಹಿತ್ಯ ರಚಿತವಾಗಿರುವಂತೆ ಇಲ್ಲಿಯೂ ಅಂತ ಸಾಹಿತ್ಯ ವನ್ನು ನಮ್ಮ ಮಕ್ಕಳ ಸಲುವಾಗಿ ರಚಿಸುವ ಪ್ರಯತ್ನ ನಡೆಯಿತು. ನಮ್ಮ ಮಕ್ಕ ಳನ್ನು ಪಠ್ಯ ಪುಸ್ತಕಗಳ ಸೆರೆಯಿಂದ ಬಿಡಿಸಿ, ಅವರಿಗೆ ಮನರಂಜನೆ, ಆಹ್ಲಾದ ಕೊಡುವಂಥ ಸಾಹಿತ್ಯವನ್ನು ಸೃಷ್ಟಿ ಮಾಡಿದ ಕೀರ್ತಿ ಮಂಗಳೂರಿನ ಪಂಜೆ ಮಂಗೇ ಶರಾಯರಿಗೆ ಸಲ್ಲುತ್ತದೆ. ಅವರೇ ನಮ್ಮ ಕನ್ನಡ ಮಕ್ಕಳ ಸಾಹಿತ್ಯ ನಿರ್ಮಾಪಕರಲ್ಲಿ ಆದ್ಯರು.

ಧಾರವಾಡದ ಕಡೆ ಮಕ್ಕಳ ಶಿಕ್ಷಣ ಕ್ಷೇತ್ರದಲ್ಲಿ ಬಲು ದೊಡ್ಡ ಹೆಸರು ಡೆಪ್ಯೂಟಿ ಚೆನ್ನಬಸಪ್ಪನವರು ಮತ್ತು ತೂರಮರಿ ಅವರುಗಳು ಪ್ರಾಥಮಿಕ ಶಾಲಾ ಮಕ್ಕಳಿಗೆ ಪಠ್ಯಪುಸ್ತಕಗಳ ರಚನೆಯಲ್ಲಿ ಶ್ರಮಿಸಿದುದು ಉಲ್ಲೇಖಾರ್ಹವಾದುದು. ೧೯೦೩ ರ ಹೊತ್ತಿಗೆ ಈ ಕಡೆ ಹೊನ್ನಾಪುರ ಮಠ ಗದಿಗೆಯ್ಯನವರು ಬಾಲ ರಾಮಾಯಣ ಬಾಲ ಭಾರತಗಳನ್ನು ರಚಿಸಿದ್ದರೆಂದು ಹರ್ಡೇಕರ್ ಮಂಜಪ್ಪನವರ ಸ್ಮಾರಕ ಗ್ರಂಥ ದಲ್ಲಿ ಉಕ್ತವಾಗಿದೆ. ಇವರ ನಂತರ ಧಾರವಾಡದ ಗೌರೀಶ ವಾಚನ ಮಾಲೆಯನ್ನು ಪ್ರಾರಂಭಿಸಿದ ಶಂಭುಲಿಂಗಪ್ಪ ಸೋಮಪ್ಪ ಕುಲಕರ್ಣಿ ಅವರ ಪ್ರಯತ್ನ ಸ್ಮರಿಸತಕ್ಕ ದ್ದಾಗಿದೆ. ಅವರ "ನಾಡನೆಲೆಗಾರ" ಎಂಬ ಕಥೆಯ ಪುಸ್ತಕ ಆ ಕಾಲದಲ್ಲಿ ಮಕ್ಕಳನ್ನು ಬಹಳವಾಗಿ ಆಕರ್ಷಿಸಿದ ಸಂಕಲನವಾಗಿದೆ.

ಹರ್ಡೇಕರ್ ಮಂಜಪ್ಪನವರು ವೀರಶೈವ ಸಮಾಜದ ಶಿಕ್ಷಕ-ಸಮಾಜ ಸೇವಾ ಧುರೀಣರಲ್ಲಿ ಪ್ರಸಿದ್ಧರು. ಅವರು ಸ್ವರಾಜ್ಯ ಚಳವಳಿಯಲ್ಲಿ ಧುಮುಕಿ ತಿಲಕರ ವಿಶ್ವಾಸ ಸಂಪಾದಿಸಿ ಗಾಂಧೀ ಚಳುವಳಿಯಲ್ಲಿ ಪಾಲುಗೊಂಡು ಸತ್ಯಾಗ್ರಹಾಶ್ರಮ ಸ್ಥಾಪಿಸಿದರು. ಗಂಗಾಧರರಾವ್ ದೇಶ ಪಾಂಡೆಯವರಿಂದ " ಕರ್ನಾಟಕ ಗಾಂಧಿ " ಎಂದು ಕರೆಸಿಕೊಂಡರು. ನಮ್ಮ ಮಕ್ಕಳಿಗಾಗಿ ಹರ್ಡೇಕರ್ ಮಂಜಪ್ಪನವರು ಬುದ್ಧಿಯ ಮಾತು, ಆರೋಗ್ಯ ಜೀವನ, ಭಾಗ್ಯದ ಕೈ, ಗೋ ಸೇವೆ, ಗಾಂಧಿ ಸಂದೇಶ, ಲಜಪತರಾಯರ ಚರಿತ್ರೆ, ಬಸವಣ್ಣನವರ ಚರಿತ್ರೆ, ಪ್ರಭುದೇವರ ಕಥೆ, ಅಣ್ಣನ ಕ್ರಾಂತಿ, ಅಕ್ಕನ ಉಪದೇಶ, ಕಾಯಕವೇ ಕೈಲಾಸ, ಕಚದೇವನ ಕಥೆ ಹೀಗೆ ಇನ್ನೆಷ್ಟೋ ಮಕ್ಕಳ ಪುಸ್ತಕಗಳನ್ನು ಬರೆದಿದ್ದಾರೆ.



ಮಕ್ಕಳಿಗೆ ಪದ್ಯ ಸಂಗ್ರಹಗಳನ್ನು ರಚಿಸಿಕೊಟ್ಟವರಲ್ಲಿ ಹಿರಿಯ ಹೆಸರು "ಕಾವ್ಯಾ ನಂದ" ರೆಂದು ಪ್ರಸಿದ್ಧರಾಗಿರುವ ಸಿದ್ಧಯ್ಯ ಪುರಾಣಿಕರದು. ಅವರು ೧೯೫೫ ರಲ್ಲಿ "ವಿಕಾಸವಾಣಿ" ಎಂಬ ಕವನ ಸಂಕಲನವನ್ನು ರಚಿಸಿದರು. ಮಾಸ್ತಿ ನರಸಿಂಗರಾ ಯರು ತಮ್ಮ ಮುನ್ನುಡಿಯಲ್ಲಿ "ಇದರಲ್ಲಿ ಉದ್ದಿಷ್ಟರಾದ ಓದುಗರು ಹಳ್ಳಿಗರು ಮತ್ತು ಸಣ್ಣ ಮಕ್ಕಳು. ಅವರ ಮನಸ್ಸಿಗೆ ಹಿಡಿಯುವಂತೆ ಬರೆಯುವ ಕೌಶಲವನ್ನು ಕಾವ್ಯಾ ನಂದರು ಪಡೆದಿದ್ದಾರೆ" ಎಂದಿದ್ದಾರೆ. ತುಪ್ಪಾ ರೊಟ್ಟಿ ಗೇ ಗೇ ಗೇ" ಎಂಬ ಮಕ್ಕಳ ಪದ್ಯ ಸಂಗ್ರಹ ೧೯೬೪ ರಲ್ಲಿ ಪ್ರಕಟವಾಯಿತು ಕಾವ್ಯಾನಂದರ ಲೇಖನಿಯಿಂದ. ಅವರ ಇತ್ತೀಚಿನ ಮಕ್ಕಳ ಪದ್ಯ ಸಂಗ್ರಹ ಗಿಲ್ ಗಿಲ್ ಗಿಲಗಂಚಿ ೧೯೭೮ ರಲ್ಲಿ ಪ್ರಕಟವಾ ಗಿದೆ. ಕಾವ್ಯಾನಂದರು ನಮ್ಮ ಮಕ್ಕಳಲ್ಲಿ ಸಮಕಾಲೀನ ಪ್ರಜ್ಞೆಯನ್ನು ಪ್ರಚೋದಿಸ ಬೇಕೆಂಬ ಹಂಬಲ ಉಳ್ಳವರು. ಅವರ ಕವನಗಳಲ್ಲಿ ಅದು ಎದ್ದು ಕಾಣುತ್ತದೆ "ಕೊಡು ಖಡ್ಗವ ಕೈಗೆ" ಎನ್ನುವ ಕವನದಲ್ಲಿ ಸೃಷ್ಟಿಯಾಗಿರುವ ವೀರ ಅಭಿಮನ್ಯುವಿಗೆ ಸಾಟಿ ಯಾಗಿನಿಲ್ಲುವಂಥ ಕೆಚ್ಚುಳ್ಳವನು.

ಗುರುಪಾದ ಸ್ವಾಮಿ ಹಿರೇಮಠರು "ಹಾಲು ಗಿಂಡಿ" ನನ್ನ ಪುಸ್ತಕ ಹೊಸಮನಿ ಸಂಗಮೇಶರು " ಜೋಲ ಬುಗರಿ " ಸಕ್ಕರೆ ಗುಬ್ಬಿ ಶಂ. ಗೋ ಬಿರಾದಾರರು "ನನ್ನ ಹಾಡು" " ಕಾರಂಜಿ " ಉಕವೀಳರು "ಗೊಂಬವ್ವ" ಚ, ನಿಂ, ಹೊಸಮನಿ "ಪುಟ್ಟ ಭಾರತ"-ಪಿ. ಬಿ. ಪಾಟೀಲ್" ಅಮ್ಮ ಹಾಡುಹೇಳು"—ಈಶ್ವರ ಕಮ್ಮಾರರು "ಮಕ್ಕಳ ಲೋಕ"–ಸೋಮಚಂದ್ರಶೇಖರಯ್ಯ "ಶಾಲಾ ಮಕ್ಕಳ ಗೀತೆ ಗಳು" ಎಂಬ ಮಕ್ಕಳ ಪದ್ಯ ಸಂಗ್ರಹಗಳನ್ನು ರಚಿಸಿ ಪ್ರಕಟಿಸಿದ್ದಾರೆ. ಈ ಕವಿಗಳಲ್ಲಿ ಹಳತು ಹೊಸತು ವಿಷಯಗಳನ್ನು ಹೇಗೆ ಬಳಸಬೇಕು ಎಂಬ ಪರಿಜ್ಞಾನವುಂಟು. ಕ್ರಿಮಿಕೀಟ, ಪಶು ಪಕ್ಷಿ, ಪ್ರಕೃತಿ ಸೌಂದರ್ಯ, ರೈಲು, ಮೋಟಾರು, ರೇಡಿಯೊ, ಏರೋ ಪ್ಲೈನ್, ನೇಗಿಲು ಬಂದೂಕ ಎಲ್ಲವೂ ಕವನಗಳಿಗೆ ವಸ್ತುಗಳೇ ಈ ಕವಿಗಳಿಗೆ. ದೇಶ ಭಕ್ತಿಯಂತೂ ಕವಿಗಳ ಉಸಿರಾಗಿದೆ. ಗಾಂಧಿ, ನೆಹರು. ಲಾಲ್‌ಬಹದ್ದೂರ್ ಶಾಸ್ತ್ರಿ ಮೊದಲಾದ ದೇಶಭಕ್ತರನ್ನು ಕುರಿತು ಪದ್ಯ ಕಟ್ಟದಿದ್ದರೆ ಸಾಧ್ಯವೇ ಇಲ್ಲ ಈ ಕವಿಗಳಿಗ. ಆದರೂ ಸಮಕಾಲೀನ ಪ್ರಜ್ಞೆಯನ್ನು ಮರೆತಿಲ್ಲ ಈ ಕವಿಗಳು.

ಮಕ್ಕಳಿಗೆ ಕಥೆ ಕೇಳುವುದರಲ್ಲಿ ಆಸಕ್ತಿ ಹೆಚ್ಚು. ಕುತೂಹಲದಿಂದ ತೆರದ ಬಾಯಿ ಮುಚ್ಚದೆ, ಬಿಟ್ಟ ಕಣ್ಣು ಬಿಟ್ಟ ಹಾಗೆ ಕಿವಿಯರಳಿಸಿ ಕೇಳುತ್ತಾರೆ. ಪಶು ಪಕ್ಷಿಗಳು, ಹಾವು ಹುಳಾ ಹುಪ್ಪಟೆ ಎಲ್ಲವೂ ಅವರ ಕಥೆಗಳಿಗೆ ವಸ್ತುಗಳೇ. ಸಿಸು ಸಂಗಮೇಶರು ನರಿಯ ಫಜೀತಿಯನ್ನು ಬಹಳ ಸಾರಸವಾಗಿ ಬಣ್ಣ ಬಣ್ಣವಾಗಿ ಕಥೆ ಕಟ್ಟಿ ಹೇಳಿದ್ದಾರೆ. ಪಂಡಿತ ಚನ್ನಪ್ಪ ಎರೇಸೀಮೆ ಅವರು "ಸಾಲ ತೀರಿಸಿದ ನಾಯಿ" ಎಂಬ ಪುಟ್ಟ ಕಥಾ ಪುಸ್ತಕ ಬರೆದಿದ್ದಾರೆ. ಎರೆಸೀಮೆ ಅವರು ಸರಳವಾಗಿ ಸ್ವಾರಸ್ಯವಾಗಿ ಕಥೆಹೇಳಿದ್ದಾರೆ.

ಸಿಶು ಸಂಗಮೇಶ, ಎರೆಸೀಮೆಯದರು ಕಥೆಗಳು ಚಿಕ್ಕವಾಗಿವೆ, ಮಕ್ಕಳಮನಸ್ಸನ್ನು ಸೂರೆಗೊಳ್ಳುವ ಗುಣ ಹೊಂದಿವೆ.

"ವಾಗೀಶ" ಎಂಬ ಹೆಸರಿನಿಂದ ಪ್ರಸಿದ್ಧರಾಗಿದ್ದ ಶ್ರೀರಾಮಾರಾಧ್ಯರು "ಕೂರ್ಲಾಂಡರ್" ಎಂಬಾತನ ಜಾನಪದ ಕಥಾ ಸಂಗ್ರಹದಿಂದ ಕೆಲವು ಕಥೆಗಳನ್ನು ಆರಿಸಿ, "ಬೇಟೆಗಾರನ ಮಗ" ಎಂಬ ಹೆಸರಿನಲ್ಲಿ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಗಾಗಿ ಭಾಷಾಂತರಿಸಿದ್ದಾರೆ. ಭಾಷಾಂತರ, ಮೂಲಕ್ಕೆ ಕುಂದುತಂದಿಲ್ಲ ಭಾಷೆ ಸರಳವಾಗಿ ಸ್ವಂತ ರಚನೆಯೇ ಎಂಬಷ್ಟು ಕಥೆಗಳು ಸ್ವಾರಸ್ಯವಾಗಿವೆ.

ಪ್ರಚಲಿತ ಪ್ರಜ್ಞೆ ನಮ್ಮ ಮಕ್ಕಳ ಕಥೆಗಾರರಲ್ಲಿ ಬೆಳೆಯುತ್ತದೆ ಎಂಬುದಕ್ಕೆ ಸಾಕ್ಷಿ ಮಾದೇವ ಮಿತ್ರ ಅವರು ಭಾರತದ ಸ್ವಾತಂತ್ರ್ಯಕ್ಕಾಗಿ ಕ್ರಾಂತಿ ಪಥಹಿಡಿದು ಹೋರಾಡಿ ರಕ್ತದಾನ ಮಾಡಿ ಸತ್ತ ವೀರದೇಶಭಕ್ತರನ್ನು "ಮಾಡಿ ಮಡಿದರು" ಕಥಾವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ. ಕ್ರಾಂತಿಯ ಕಹಳೆಯೂದಿದ ಮೊದಲಿಗ ವಾಸುದೇವ ಬಳವಂತ ಫಡಕೆಯಿಂದ ಪ್ರಾರಂಭವಾಗಿ ನೇತಾಜಿ ಸುಭಾಸಚಂದ್ರರವರೆಗೆ "ಮಾಡಿ ಮಡಿದವರು" ಕಥೆ ಸಾಗತ್ತದೆ. ೧೪ ಜನ ಕ್ರಾಂತಿಕಾರರ ವೀರಗಾಥ "ಮಾಡಿಮಡಿದವರಲ್ಲಿ" ಬಿಸಿರಕ್ತದ ಬರವಣಿಗೆಯಾಗಿ ಮೂಡಿಬಂದಿದೆ. ಮಾದೇವ ಮಿತ್ರರು "ಮಂಗಳ ಲೋಕದ ಅಂಗಳಕೆ" ಎಂಬ ಇನ್ನೊಂದು ಸ್ವಾರಸ್ಯವಾದ ಪುಸ್ತಕವನ್ನು ಬರೆದು ನಮ್ಮ ಕೈಯಲ್ಲಿ ಇಟ್ಟಿದ್ದಾರೆ. ಸೂರ್ಯನ ಬಳಗದ ಪರಿಚಯವಿದೆ. ನಮ್ಮ ನೆರೆಯ ಚಂದ್ರನನ್ನು ನಮ್ಮ ಪ್ರಕೃತಿಪರಿಚಯ ಮಾಡಿಕೊಳ್ಳುತ್ತಾರೆ. ನಮ್ಮ ಸಮೀಪದ ಲೋಕದ ಪರಿಚಯವೂ ಆಗುತ್ತದೆ. ಮೇಲು ಲೋಕದ ಗ್ರಹಗಳಿಗೆ ಮಾನವ ಹೋಗಿಬರುವುದಕ್ಕೆ ರಾಕೆಟ್ ಪರಿಚಯಪುಸ್ತಕ ಜನನವಾಗಿದೆ. ರಾಕೆಟ್ ಬಿಡುವ ವಿವರ ಕೊಟ್ಟಿದ್ದಾರೆ. "ನೆರೆಯಲ್ಲಿ ಜಿಂಕೆ" ಇದು ಭಾರತ ದೇಶವನ್ನು ನೆರೆಹೊರೆಯ ದೇಶ, ಭಾಯಿ ಭಾಯಿ "ಎಂದು ಹೇಳಿಕೊಳ್ಳುತಿದ್ದಾ ಚೈನ ಕಬಳಿಸ ಬಂದಾಗ ನಾವು ಏನು ಮಾಡಿದೆವು? ಎಂಬುದನ್ನು ಕುರಿತು ಸ್ವಾರಸ್ಯವಾಗಿ ನಿರೂಪಿಸುವ ಒಂದು ನೀಳ್ಗತೆ.

"ಚಂದ್ರನ ಮೇಲೆ ಇಳಿದರು" ಈ ಪುಸ್ತಕವನ್ನು ಮಕ್ಕಳವೈಜ್ಞಾನಿಕ ಕಾದಂಬರಿ ಎಂದು ಕರೆದಿದ್ದಾರೆ ಪ್ರಕಾಶಕರು. ಈ ಮಕ್ಕಳ ಕಾದಂಬರಿಯ ಲೇಖಕರು "ಶಶಿಕುಮಾರ" ಮಾಣಿ ಮತ್ತು ಮಂಗಳೆ ಎಂಬ ಇಬ್ಬರು ಮಕ್ಕಳು ಚಂದ್ರಲೋಕಕ್ಕೆ ಹೋದದ್ದು ಈಗ್ರಂಥದಕಥಾವಸ್ತು. ರಷ್ಯ, ಅಮೆರಿಕ, ತಮ್ಮವರನ್ನು ಚಂದ್ರಲೋಕಕ್ಕೆ ಕಳಿಸಿ ಹೊಸ ಶಕೆಯನ್ನು ಪ್ರಾರಂಭಿಸಿತಲ್ಲಿ. ಆ ಸಾಹಸಕಥೆಯನ್ನು, ಚಂದ್ರಲೋಕದ ಮೇಲೆ ಮಾನವ ಹಾಯಿಸಿದ ವಿಜಯ ಧ್ವಜದ ಕಥೆಯನ್ನು ಇಲ್ಲಿ ಮೆಲುಕು ಹಾಕಬಹುದು ನಮ್ಮ ಮಕ್ಕಳು ಜ್ಞಾಪಿಸಿಕೊಂಡು.



ವಿಚಾರ ಸಾಹಿತ್ಯ ವಿಜ್ಞಾನಸಾಹಿತ್ಯ ನಮ್ಮ ಮಕ್ಕಳಿಗೆ ಅವಶ್ಯಕ ಎಂದು ಮನಗಂಡವರಲ್ಲಿ ಪಂಡಿತ ಚನ್ನಪ್ಪ ಎರೇಸೀಮೆಯವರು ಒಬ್ಬರು. ಅವರು "ಜೇನು" ಮತ್ತು "ತೆಂಗ" ಎಂಬ ಎರಡು ಪುಟ್ಟ ಪುಸ್ತಕಗಳ್ನು ಸಾಕಷ್ಟು ಚಿತ್ರವೊದಗಿಸಿ ಬರೆದು ಮಕ್ಕಳಿಗೆ ಉಪಕಾರ ಮಾಡಿದ್ದಾರೆ. ಸಂಭಾಷಣೆಯ ರೂಪದಲ್ಲಿ ಈ ಎರಡು ಪುಸ್ತಕಗಳ ವಿಷಯ ಜೇನು, ತೆಂಗು ಈ ಎರಡು ಪುಟ್ಟ ಪುಸ್ತಕಗಳು ಮಕ್ಕಳ ವೈಜ್ಞಾನಿಕ ಸಾಹಿತ್ಯ ಬೊಕ್ಕಸಕ್ಕೆ ಅಮೂಲ್ಯ ನಿಧಿಯಾಗಿವೆ. ಶ್ರೀ ಎರೇಸೀಮೆಯವರು ಅರವಿಂದ ಎಂಬ ಇನ್ನೊಂದು ಮಕ್ಕಳಪುಸ್ತಕವನ್ನು ಬರೆದಿದ್ದಾರೆ. ಅರವಿಂದರ ಈ ಜೀವನಪುಸ್ತಕದಲ್ಲಿ ಮಕ್ಕಳಿಗೆ ಹಿಡಿಸುವ ರೀತಿಯಲ್ಲಿ ಮೂಡಿಬಂದಿದೆ. ಈ ದಿಸೆಯಲ್ಲಿ ಸಿಸು ಸಂಗಮೇಸರ "ನನ್ನ ಮನೆ" ( ಪಕ್ಷಿಗಳ ಮನೆ ಮರಿಗಳ ಪರಿಚಯ ) ಯನ್ನು ಸೇರಿಸಿಕೊಳ್ಳಬಹುದು.

ನಮ್ಮ ಮಕ್ಕಳಿಗೆ ಪ್ರವಾಸ ಸಾಹಿತ್ಯವನ್ನು ಒದಗಿಸಿ ಉಪಕಾರಮಾಡಿದ ಸಂಸ್ಥೆಯೆಂದರೆ ಅದು ಕರ್ಣಾಟಕ ಶಿಕ್ಷಣ ಇಲಾಖೆಯ ಶಿಕ್ಷಣ ಸಂಶೋಧನ ಶಾಖೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಶಿಕ್ಷಕ ಲೇಖರನ್ನು ಕರೆಸಿಕೊಂಡು, ಅವರಿಗೆ ಸಾಹಿತ್ಯ ಶಿಕ್ಷಣ ಶಿಬಿರವನ್ನು ಒಂದೆರಡುವಾರ ಏರ್ಪಡಿಸಿ, ಭಾರತದ ನಾನಾ ಭಾಗಗಳಿಗೆ ಕಳಿಸಿ. ಪ್ರತ್ಯಕ್ಷ ಅನುಭವದಿಂದ ಪ್ರವಾಸ ಸಾಹಿತ್ಯರಚಿಸುವಂತೆ ಶಿಕ್ಷಣ ಸಂಶೋಧನ ಶಾಖೆ ಏರ್ಪಾಡು ಮಾಡಿತು. ೧೯೭೩ರಲ್ಲಿ ಈ ಶಿಬಿರದಲ್ಲಿ ಸುಮಾರು ೧೯ ಮಂದಿ ಶಿಕ್ಷಕ ಲೇಖಕರುಗಳು ಕರ್ಣಾಟಕದ ನಾನಾ ಭಾಗಗಳಿಂದ ಬಂದು ಬೆಂಗಳೂರಿನಲ್ಲಿ ಸಮಾವೇಶಗೊಂಡಿದ್ದರು. ಶಿಬಿರದ ಚಟುವಟಿಕೆ ಮುಗಿದ ಮೇಲೆ ಶಿಕ್ಷಕ ಲೇಖಕರುಗಳ ಭಾರತದ ನಾನಾ ರಾಜ್ಯಗಳಿಗೆ ಹೋಗಿ ಸ್ವತಃ ತಾವು ಅನುಭವ ಪಡೆದು ಕರ್ಣಾಟಕ್ಕೆ ಹಿಂದಿರುಗಿ ಬಂದು "ನನ್ನ ಮನೆ" ಎಂಬ ಶೀರ್ಶಿಕೆಯಲ್ಲಿ ಪ್ರವಾಸ ಸಾಹಿತ್ಯ ನಿರ್ಮಾಣವಾಯಿತು. ಇನ್ನು ಗುರುಪಾದ ಸ್ವಾಮಿ ಹಿರೇಮಠ ಗುಜರಾತನ್ನು ಎಸ್. ಜಿ. ಸಂಗಮ, ಮಧ್ಯ ಪ್ರದೇಶವನ್ನು ಉಳವೀಶ, ಉತ್ತರ ಪ್ರದೇಶವನ್ನು ಎಂ. ವಿರೂಪಕ್ಷಯ್ಯ, ಅಸ್ಸಾಮ್‌ನ್ನು ಈಶ್ವರ ಚಿಂತಾಮಣಿ ರಚಿಸಿದ್ದಾರೆ. ಆಯಾ ರಾಜ್ಯಗಳ ಬಾಲಕರು ತಮ್ಮ ತಮ್ಮ ರಾಜ್ಯಗಳ ಭೌಗೋಳಿಕ, ಚಾರಿತ್ರಕ, ಸಾಂಸ್ಕೃತಿಕ ಸಾಮಾಜಿಕ ಜೀವನವನ್ನು ತಾವೇತಮ್ಮ ಸರಳಶೈಲಿಯಲ್ಲಿ ಸ್ವಾರಸ್ಯವಾಗಿ ಹೇಳಿಕೊಳ್ಳುತ್ತಾರೆ. ಈ ತಂತ್ರವನ್ನು "ನನ್ನ ಮನೆ" ಶೀರ್ಷಿಕೆಯುಲ್ಲಿ ಪುಸ್ತಕ ಬರೆದ ಎಲ್ಲ ಲೇಖಕರು ಅನುಸರಿಸಿದ್ದಾರೆ. ಲೇಖಕರು ತಾವೇ ಆಯಾ ರಾಜ್ಯಗಳ ಬಾಲಕರುಗಳ ಮಟ್ಟಕ್ಕೆ ಇಳಿದು ಸ್ವತಃ ಹೇಳಿಕೊಳ್ಳುವ ವಸ್ತು ನಿರೂಪಣ ಕಲೆ ಇಲ್ಲಿ ಸಾಧಿಸಿದೆ. ಮಕ್ಕಳ ಪ್ರವಾಸ ಸಾಹಿತ್ಯ ಇಲ್ಲವಲ್ಲ ಎಂಬ ಕೊರತೆ ಸಾಕಷ್ಟು ತುಂಬಿ, ಪೂರ್ಣ ತೃಪ್ತಿ ಇಲ್ಲದಿದ್ದರೂ ಇಷ್ಟಾದರೂ ಇದೆಯಲ್ಲ ಎಂದು ಸಮಾಧಾನ ಪಟ್ಟುಕೊಳ್ಳೋಣ.

ಸಿಶು ಸಂಗಮೇಶರುಪ್ರವಾಸ ಸಾಹಿತ್ಯಕ್ಕೆ ಪೂರಕವಾಗಿಯೋ ಏನೋ ಎಂಬಂತೆ " ನನ್ನ ಗೆಳೆಯ ಜಪಾನದ ಟಾರೊ " ಎಂಬ ಪುಸ್ತಕವನ್ನು ಎರಡು ಭಾಗಗಳಲ್ಲಿ ರಚಿಸಿದ್ದಾರೆ. ಬಸವರಾಜ ಎಂಬ ಬಾಲಕ ಜಪಾನಿನ ರಾಜಧಾನಿ ಟೋಕಿಯೊ ಪಟ್ಟಣದಿಂದ ತನ್ನ ತಾಯಿಗೆ ಪತ್ರ ಬರೆದು ಜಪಾನಿನ ಪರಿಚಯ ಮಾಡಿಕೊಡುತ್ತಾನೆ. ಪತ್ರದ ಮುಖೇನ ತನ್ನ ಅಕ್ಕನಿಗೆ ಜಪಾನಿನ ವೈಶಿಷ್ಟ್ಯಗಳನ್ನು ತಿಳಿಸುತ್ತಾ ಹೋಗುತ್ತಾನೆ. ಪುಸ್ತಕವನ್ನು ವಿಶೇಷ ಶ್ರದ್ಧೆವಹಿಸಿ ಸಚಿತ್ರವಾಗಿ ಪ್ರಕಟಿಸಿದ್ದಾರೆ. ಸಿಸುಸಂಗಮೇಸರು ಇತ್ತೀಚಿಗೆ "ಬಾಲಭಾರತಿ" ಎಂಬ ಮಕ್ಕಳ ಮಾಸಪತ್ರಿಕೆ ಹೊರಡಿಸುತ್ತಿದ್ದಾರೆ.

ಜೀವನ ಚರಿತ್ರೆಗಳು ಕನ್ನಡ ಸಾಹಿತ್ಯದಲ್ಲಿ ಅಪರೂಪವಾಗಿದ್ದ ಕಾಲ, ಇನ್ನು ಮಕ್ಕಳಿಗಾಗಿ ಜೀವನ ಚರಿತ್ರೆಗಳು ಎಲ್ಲಿ ಬರಬೇಕು. ಸುಬೋಧ ರಾಮರಾಯರು ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯಲ್ಲಿ ಸುಮಾರು ನೂರಮೂವತ್ತೇಳು ಜೀವನ ಚರಿತ್ರೆಗಳನ್ನು ಬರೆದು ಈ ಕೊರತೆಯನ್ನು ನೀಗಿದರು. ಮಕ್ಕಳಿಗೆ ಜೀವನ ಚರಿತ್ರೆಗಳನ್ನು ಬರೆದ ಇನ್ನೊಬ್ಬರು ಸಿಂಪಿ ಲಿಂಗಣ್ಣ. ಇವರು " ಭಗವಾನ್ ಬುದ್ಧದೇವ " ಎಂಬ ಪುಸ್ತಕವನ್ನು ಬರೆದಿದ್ದಾರೆ.

ನಾಟಕಗಳ ಕೊರತೆ ಇನ್ನೂ ತುಂಬಿ ಬಂದಿಲ್ಲ ಮಕ್ಕಳ ಸಾಹಿತ್ಯದಲ್ಲಿ. ನನಗೆ ವೀರಶೈವ ಸಾಹಿತ್ಯ ಸಾಹಿತಿ ಉಳವೀಶರು ರಚಿಸಿದ "ಬಾಲ ತಪಸ್ವಿ" ಎಂಬ ಒಂದು ನಾಟಕ ಮಾತ್ರ ಸಿಕ್ಕಿದೆ. ಬಿ. ಪುಟ್ಟಸ್ವಾಮಯ್ಯನವರು "ದುರ್ಗಾದೇವಿ" ಎಂಬ ಮಕ್ಕಳ ನಾಟಕವನ್ನು ಬರೆದಿರುವರೆಂದು ನನ್ನ ನೆನಪು.

ಐ. ಬಿ. ಹೆಚ್. ಪ್ರಕಾಶನ ಕನ್ನಡ ಮಕ್ಕಳ ಸಲುವಾಗಿ ದಿವಂಗತ ಅ. ನ. ಕೃಷ್ಣರಾಯರ ಸಂಪಾದಕತ್ವದಲ್ಲಿ "ಕನ್ನಡ ನಾಡು ಮತ್ತು ಕನ್ನಡಿಗರ ಪರಂಪರೆ" ಎಂಬ ಮಾಲೆಯನ್ನು ೧೯೭೦–೭೧ ರಲ್ಲಿ ಪ್ರಾರಂಬಿಸಿತು. ಆಗಿನಿಂದ ಈವರೆಗೆ ಐನೂರಕ್ಕೂ ಮೇಲ್ಪಟ್ಟ ಪುಸ್ತಕಗಳನ್ನು ಪ್ರಕಟಿಸಿದೆ. ಕನ್ನಡದ ಕಡುಗಲಿಗಳು, ಕನ್ನಡದ ಕವಿಪುಂಗವರು. ಕನ್ನಡದ ಯತಿವರೇಣ್ಯರು, ಕರ್ನಾಟಕ ವೈಭವ, ಆಧುನಿಕ ಕರ್ನಾಟಕದ ನಿರ್ಮಾಪಕರು, ಕರ್ನಾಟಕದ ಕಲಾವಿದರು, ಕರ್ನಾಟಕದ ರಾಜವಂಶಗಳು ಮತ್ತು ಕರ್ನಾಟಕದ ಪ್ರಾಚೀನ ಆಧುನಿಕ ದೇಣಿಗೆ ಹೀಗೆ "ಕನ್ನಡನಾಡು ಮತ್ತು ಕನ್ನಡಿಗರ ಪರಂಪರೆ" ಮಾಲೆಯ ಪುಸ್ತಕಗಳನ್ನು ವರ್ಗೀಕರಣ ಮಾಡಿದೆ. ಈ ಮಾಲೆಗೆ ತಮ್ಮ ಲೇಖನವನ್ನು ಬರೆದು ಕೊಟ್ಟ ವೀರಶೈವ ಸಾಹಿತಿಗಳ ಹೆಸರು ಹಾಗೂ ಕೃತಿಗಳನ್ನು ಕನ್ನಡ ಕಡುಗಲಿಗಳು, ಕನ್ನಡ ಕವಿಪುಂಗವರು,



ಕನ್ನಡದ ಯತಿವರೇಣ್ಯರು, ಕರ್ನಾಟಕದ ವೈಭವ, ಆಧುನಿಕ ಕರ್ನಾಟಕದ ನಿರ್ಮಾಪಕರು, ಕರ್ನಾಟಕದ ಕಲಾವಿಧರು, ಕರ್ನಾಟಕದ ರಾಜವಂಶಗಳು, ಕರ್ನಾಟಕದ ಪಾಚೀನ ಆಧುನಿಕದೇಣಿಗೆ ಹೀಗೆ ಕನ್ನಡ ನಾಡು ಮತ್ತು ಕನ್ನಡಿಗರ ಪರಂಪರೆಯ ಮಾಲಿಕೆಯ ಕ್ರಮದಲ್ಲಿಯೇ ತಿಳಿಯಬಹುದು.

ಐ.ಬಿ.ಹೆಚ್. ಪ್ರಕಾಶನದ ಆಶ್ರಯದಲ್ಲಿ "ಕನ್ನಡ ನಾಡು ಮತ್ತು ಕನಡಿಗರ ಪರಂಪರೆ ಮಾಲೆ" ಬುದ್ಧಿ ಬೆಳೆದು ತಿಳುವಳಿಕೆ ಮಾಡಿತು. ಪ್ರವೃದ್ಧಮಾನವಾಗಲಿರುವ ಮಕ್ಕಳಿಗೆ ತುಂಬ ಪ್ರಯೋಜನಕಾರಿಯಾಗಿದೆ. ವಿಶ್ವವಿದ್ಯಾನಿಲಯಗಳ ವಿದ್ವಾಂಸರು, ಸುಪ್ರಸಿದ್ಧ ಸಾಹಿತಿಗಳು, ಮಠಾಧಿಪತಿಗಳು, ಪಂಡಿತರು, ಈ ಮಾಲೆಯ ಲೇಖಕ ಬಳಗದಲ್ಲಿದ್ದಾರೆ. ಈ ಮಾಲೆಯ ಬಹುಮಂದಿ ಲೇಖಕರು ತಮ್ಮ ತಮ್ಮ ವಿಷಯಗಳಲ್ಲಿ ತಜ್ಞರಾಗಿದ್ದಾರೆ. ಆದರೆ ಮಕ್ಕಳ ವಯೋಮಿತಿ ಮನೇಲಿ ಧರ್ಮಕ್ಕೆ ಇಳಿದು ಸರಳವಾಗಿ ವಿಷಯ ಹೇಳುವುದರಲ್ಲಿ ಸಾಫಲ್ಯರಾಗಿಲ್ಲವೇನೋ ಎನ್ನಿಸುತ್ತದೆ. ಐ.ಬಿ.ಹೆಚ್. ಪ್ರಕಾಶನದ ಸಾಹಸವನ್ನು ಕನ್ನಡಿಗರು ಮೆಚ್ಚಲೇಬೇಕು. ಇದರಲ್ಲಿ ಸಂಶಯವಿಲ್ಲ.

ಬೆಂಗಳೂರಿನ ರಾಷ್ಟ್ರೋತ್ಥಾನ ಪರಿಷತ್ತು ಕನ್ನಡ ಮಕ್ಕಳಿಗೆ ಐನೂರೊಂದು ಭಾರತ ಶ್ರೇಷ್ಠ ಮಹಾನ್ ವ್ಯಕ್ತಿಗಳನ್ನು ಪರಿಚಯ ಮಾಡಿಸಬೇಕೆಂದು ಒಂದು ಬೃಹತ್ ಯೋಜನೆಯನ್ನು ಮುಂದಿಟ್ಟುಕೊಂಡು ೧೯೭೪ ರಲ್ಲಿ "ಭಾರತ–ಭಾರತಿ" ಪುಸ್ತಕ ಸಂಪದ ಮಾಲೆಯನ್ನು ಪ್ರಾರಂಭಿಸಿತು. ಶ್ರೀ ಎಲ್. ಎಸ್. ಶೇಷಗಿರಿರಾಯರು ಈ ಮಾಲೆಯ ಸಂಪಾದಕರು. ಈವರೆಗೆ ಸುಮಾರು ನಾಲ್ಕುನೂರಕ್ಕೆ ಮೇಲ್ಪಟ್ಟು ಮಾಲೆಯ ಪುಸ್ತಕಗಳು ಪ್ರಕಟವಾಗಿವೆ. ಪುರಾತನರಿಂದ ಹಿಡಿದು ಆಧುನಿಕರವರೆಗೆ ಮಹಾ ಮಹಾ ವ್ಯಕ್ತಿಗಳು ಈ ಮಾಲೆಯ ಜೀವವಸ್ತುಗಳಾಗಿದ್ದಾರೆ. ಋಷಿಗಳು, ಪುರಾಣಪುರುಷರು, ರಾಜ ಮಹಾರಾಜರುಗಳು, ಕವಿಗಳು, ವಿಜ್ಞಾನಿಗಳು, ರಾಜ್ಯ ಕಟ್ಟಿದ ರಾಜಕೀಯ ಧುರೀಣರು ಹೀಗೆ ಎಲ್ಲ ಕ್ಷೇತ್ರಗಳ ಮಹಿಳೆಯರು ಮಹನೀಯರು, ಒಟ್ಟಾರೆ ಭಾರತವನ್ನು ಮಹಾರಾಷ್ಟ್ರವನ್ನಾಗಿ ಮಾಡಿದ ಸಮಸ್ತರೂ ಈ ಮಾಲೆಯ ಮೆರವಣಿಕೆಯಲ್ಲಿದ್ದಾರೆ. ಈ ಮಾಲೆಯ ವೀರಶೈವ ಲೇಖಕರುಗಳನ್ನು ಗಮನಿಸಬಹು.

ಕೃತಿಗಳು: ನಾಮದೇವ—ಸಿ. ಪಿ. ಲಿಂಗಣ್ಣ, ಪಂಪ—ಜಿ.ಎಸ್.ಶಿವರುದ್ರಪ್ಪ ಕುಮಾರರಾಮ—ಬಸವರಾಜ ಕಟ್ಟೀಮನಿ, ಶಿಶುನಾಳ ಶರೀಫರು—ಎಸ್. ಎಸ್. ಮಾಳವಾಡ, ನಿವೇದಿತಾ—ಪ್ರಭುಶಂಕರ, ಉಧಮಸಿಂಗ್—ಎಸ್. ಪಿ. ಸತೀಶ್ ಎಸ್.ಆರ್.ರಂಗನಾಥನ್—ಆರ್.ಶಿವಣ್ಣ, ನಾಗಮಹಾಶಯ—ಸ.ಸ.ಮಾಳವಾಡ ಹರ್ಡೇಕರ್ ಮಂಜಪ್ಪ—ಎಸ್.ಎಸ್.ಭೂಸರೆಡ್ಡಿ, ಷಡಕ್ಷರದೇವ—ಸಿ.ವಿ.ಕರಿಮನಿ

ಎಂ.ವೆಂಕಟಕೃಷ್ಣಯ್ಯ—ಬಿ.ಎಸ್.ಸ್ವಾಮಿ, ಶ್ಯಾಮಶಾಸ್ತ್ರಿ—ಬಿ.ಚೆನ್ನಮ್ಮ, ರೇವಣ ಸಿದ್ಧೇಶ್ವರ—ಎಂ.ಜಿ.ನಂಜುಂಡಾರಾಧ್ಯ, ಪೈಲಾರ ಮಹದೇವ—ವೀ. ಚ. ಹಿತ್ತಲಮನಿ, ಉತ್ತಂಗಿ ಚನ್ನಪ್ಪ—ಸದಾಶಿವಒಡೆಯರ್, ಮುಮ್ಮಡಿ ಕೃಷ್ಣರಾಜ ಒಡೆಯರ್—ಓ. ಎನ್. ಲಿಂಗಣ್ಣಯ್ಯ, ಮಿರ್ಜಾ ಗಾಲೀಬ್—ಸಿದ್ದಯ್ಯ ಪುರಾಣಿಕ್ ಸತ್ಯೇಂದ್ರನಾಥ್ ಬೋಸ್—ಕೆ.ಶಿವಶಂಕರ, ವಿಷ್ಣುಶಾಸ್ತ್ರಿ ಚಿಪುಳೂಣಕರ್—ಸಿ.ವಿ. ಕರಿಮನಿ.

ಭಾರತ-ಭಾರತಿ ಪುಸ್ತಕ ಸಂಪದ ಮಾಲೆ ಕಿಶೋರರಿಗೆಂದೇ ವ್ಯವಸ್ಥೆಯಾದ ಸಾಹಿತ್ಯ. ಈ ಮಾಲೆಯ ಲೇಖಕ ವರ್ಗದಲ್ಲಿರುವವರು ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರು, ಹೆಸರಾಂತ ಸಾಹಿತಿಗಳು, ಬಹುಮಂದಿ ಪಾಂಡಿತ್ಯಪೂರ್ಣ ಕ್ಲಿಷ್ಟ ಶೈಲಿಯನ್ನು ಉಪಯೋಗಿಸಿ ಬರೆದಿದ್ದಾರೆ. ನಮ್ಮ ಬಾಲಓದುಗರಿಗೆ ಕೆಲವು ಸಲ ನೀರಿಳಿಯದ ಗಂಟಲೊಳ್ ಕಡುಬು ತುರುಕಿದಂತಾಯಿತೇನೋ ಎಂದು ನನ್ನ ಅನಿಸಿಕೆ. ಆದರೂ ನಮ್ಮ ಬಾಲಕ ವೃಂದಕ್ಕೆ ಒಳ್ಳೆಯ ಪುಸ್ತಕಗಳು ಸಿಕ್ಕವಲ್ಲ ಎಂದು ನನಗೆ ತುಂಬ ಸಂತೋಷ. "ಭಾರತ-ಭಾರತಿ" ಪುಸ್ತಕ ಸಂಪದದ ಪ್ರಧಾನ ಸಂಪಾದಕರು ಮತ್ತು ಪ್ರಕಾಶಕರು ನಮ್ಮ ಕೃತಜ್ಞತೆಗೆ ಪಾತ್ರರು.

ಕನ್ನಡ ಸಾಹಿತ್ಯ ಪರಿಷತ್ತು ಅಂತರರಾಷ್ಟ್ರೀಯ ಮಕ್ಕಳ ವರ್ಷದಲ್ಲಿ ಸುಮಾರು ಇನ್ನೂರು ಮಕ್ಕಳ ಪುಸ್ತಕಗಳನ್ನು ಸುಲಭಬೆಲೆಯಲ್ಲಿ ಪ್ರಕಟಿಸಬೇಕೆಂದು ನಿರ್ಧರಿಸಿ ಸ್ತುತ್ಯ ಕೆಲಸ ಮಾಡಿತು. ೧೯೭೯ ರಲ್ಲಿ ಸುಮಾರು ಎಪ್ಪತ್ತೈದು ಪುಸ್ತಕಗಳು ವಿವಿಧ ವಿಷಯಗಳ ಮೇಲೆ ಕನ್ನಡ ನಾಡಿನ ಸುಪ್ರಸಿದ್ಧ ವಿದ್ವಾಂಸರು, ಸಾಹಿತಿಗಳು ವಿಷಯತಜ್ಞರುಗಳು ಪುಸ್ತಕ ಬರೆದಿದ್ದಾರೆ. ಈ ಪುಸ್ತಕಗಳು ಬಿ.ಜಿ.ಎಲ್. ಸ್ವಾಮಿ ಕೆ. ಸಿ. ಶಿವಪ್ಪ, ಅ. ರಾ. ಮಿತ್ರ ಈ ವಿದ್ವಾಂಸ ಸಾಹಿತಿಗಳ ಸಂಪಾದಕತ್ವದಲ್ಲಿ ಹೊರಬಂದಿವೆ. ಈ ಮಾಲೆಗೆ ಮಕ್ಕಳ ಪುಸ್ತಕಗಳನ್ನು ಬರೆದ ವಿವರ ಇಂತಿದೆ.

| | |
|---|---|
| ಕುಟುಂಬ | —ಶಾಂತಾದೇವಿ ಮಾಳವಾಡ |
| ರಜತಗಿರಿಯ ರಾಜ | —ಮಾದೇವ ಮಿತ್ರ |
| ನದಿಗಳು | —ಸಿ. ವಿ. ಕರಿಮನಿ |
| ಅರವಿಂದರು | —ಸಿಂಪಿ ಲಿಂಗಣ್ಣ |
| ಕವಿ ರವೀಂದ್ರ | —ಗುರುಲಿಂಗ ಕಾಪಸೆ |

"ಸಚಿತ್ರ ಶಾಲಾ ನಿಘಂಟು" ಎಂಬ ವೈಶಿಷ್ಟ್ಯಪೂರ್ಣವಾದ ಪದಾರ್ಥಕೋಶವನ್ನು ಎನ್. ಬಸವಾರಾಧ್ಯ ಮತ್ತು ಟಿ. ಆರ್. ಮಹಾದೇವಯ್ಯ ಸಂಪಾದಿಸಿ ನಮ್ಮ ಮಕ್ಕಳಿಗೆ ವಿಶೇಷ ಕೊಡುಗೆ ನೀಡಿದ್ದಾರೆ.



ಮಕ್ಕಳ ಸಾಹಿತ್ಯಕ್ಕೆ ವೀರಶೈವ ಸಾಹಿತಿಗಳ ಕೊಡುಗೆಯನ್ನು ಕುರಿತು ಸಮೀಕ್ಷೆ ನಡೆಸಿದಾಗ ಈವರೆಗೆ ಪ್ರಕಟವಾಗಿರುವ ಮಕ್ಕಳ ಪುಸ್ತಕಗಳ ಮೌಲ್ಯವನ್ನು ಕಟ್ಟಿದಲ್ಲಿ ನನಗೆ ಸಂತೋಷವಾಗಿದೆ. ಶೈಲಿ, ವಿಷಯ ನಿರೂಪಣೆ, ಒಟ್ಟಾರೆ ಮಕ್ಕಳಿಂದ ಓದಿಸಿಕೊಂಡು ಹೋಗುತ್ತದೆ.

ಇತ್ತೀಚೆಗೆ ಗದಗಿನ ತೋಂಟದಾರ್ಯ ಮಠದ ಶ್ರೀಗಳು ವೀರಶೈವ ಮಹಾ ಪುರುಷರ ಮಾಲಿಕೆಯಲ್ಲಿ ಸುಮಾರು 25-30 ಚಿಕ್ಕಚಿಕ್ಕ ಪುಸ್ತಕ ಪ್ರಕಟಿಸಿದ್ದಾರೆ. ಅವೆಲ್ಲ ೧೨ ವರ್ಷಕ್ಕೆ ಮೇಲ್ಪಟ್ಟ ಮಕ್ಕಳ ವಾಚನಾಭಿರುಚಿಗೆ ಪೋಷಕವಾಗಿವೆ. ಅವರ ಪ್ರಯತ್ನ ಈ ದಿಸೆಯಲ್ಲಿ ಇನ್ನೂ ಮುಂದುವರೆದು ನಡೆದೇ ಇದೆ. ಇವು ಆದರ್ಶ ವೀರಶೈವ ಮಹಾ ಪುರುಷರ ಸಿದ್ಧಿಸಾಧನೆಗಳಿಗೆ ಮೀಸಲಾಗಿವೆ. ಇವುಗಳ ಲೇಖಕರೆಲ್ಲ ಬಹುಷಃ ವೀರಶೈವ ವಿದ್ವಾಂಸರೇ ಆಗಿದ್ದಾರೆ. —

# ಶ್ರೀ ಈಶ್ವರ ಮ. ಮಗದುಂ

**ಕೆ. ಎಲ್. ಎ. ಸಂಸ್ಥೆಯ ಕೊಡುಗೆ**

ಅಖಿಲ ಭಾರತ ವೀರಶೈವ ಮಹಾ ಸಭಾದ ೨೦ ನೇ ಅಧಿವೇಶನ ೧೯೮೩ ರ ಅಧ್ಯಕ್ಷರು

ಸಾಮಾಜಿಕ ವ್ಯವಸ್ಥೆಯಲ್ಲಿ ೧೨ನೇ ಶತಮಾನಕ್ಕೂ ಈಗ ೨೦ನೇ ಶತಮಾನಕ್ಕೂ ಅಜಗಜಾಂತರ ವ್ಯತ್ಯಾಸವನ್ನು ನಾವು ನೋಡುತ್ತೇವೆ ಅಂದು ಜಗಜ್ಯೋತಿ ಬಸವೇಶ್ವರರು ಸಮಾಜದ ಸ್ವರೂಪವನ್ನು ಬದಲಿಸಲು ಮುಪ್ಪುರಿ ಕ್ರಾಂತಿಯ ಪ್ರತಿಪಾದಕರಾಗಿ ಇತಿಹಾಸದ ಪುಟಗಳ ಯೋಗ್ಯ ದಾಖಲೆ ಪಡೆದಿದ್ದಾರೆ. ೮೦೦ ವರ್ಷಗಳ ನಂತರ ಸಮಾಜ ವಿವಿಧ ಮಜಲುಗಳಲ್ಲಿ ಮುನ್ನಡೆದಿದೆ. ಪರಕೀಯರ ಗುಲಾಮಗಿರಾಗಿದ್ದ ಭಾರತಕ್ಕೆ ಸ್ವಾತಂತ್ರ್ಯ ಬಂದು ೩೫ ವರ್ಷಗಳಾಗಿವೆ ಜನಮನದಲ್ಲಿ ಸಾಮಾಜಿಕ, ರಾಜಕೀಯ ಪ್ರಜ್ಞೆಗಳು ವ್ಯಕ್ತಿಯ ಹಕ್ಕಿನ ಹೋರಾಟಕ್ಕೆ ಇಂಬು ಕೊಡುತ್ತವೆ. ಕೇವಲ ರಾಜಕೀಯ ಸ್ವಾತಂತ್ರ್ಯದಿಂದ ಗುರಿಮುಟ್ಟದ ಭಾರತೀಯರು, ಸಾಮಾಜಿಕ, ಆರ್ಥಿಕ, ಸ್ವಾತಂತ್ರ್ಯ ಸಾಧನೆಗೆ ಸಿದ್ದವಾಗುತ್ತಿದ್ದಾರೆ.

ಜನ ಬಳಕೆಯಲ್ಲಿದ್ದ 'ಜಾತಿ' ಎಂಬ ಪದವನ್ನು ತೊಲಗಿಸಿ 'ಧರ್ಮ' ಎಂಬುದಕ್ಕೆ ನಮ್ಮ ರಾಜ್ಯಾಂಗ ಮಾನ್ಯತೆ ನೀಡದಿದ್ದರೂ' ಸಕಲ ಜೀವಾತ್ಮರಿಗೆ ಲೇಸನೇ ಬಯಸುವ" ಈ ವೀರಶೈವ ಸಮಾಜಕ್ಕೆ ಇತ್ತೀಚಿನ ವರ್ಷಗಳಲ್ಲಿ ಯಾವ ಪಾಪದಿಂದಲೊ, ಯಾರ ಶಾಪದಿಂದಲೋ ಜಾತಿಯ ಬಣ್ಣ ಬಳೆಯಲಾಗಿದೆ. ಈ ದಿಸೆಯಲ್ಲಿ ವೀರಶೈವ, ಎಂದರೆ ಜಾತಿಯಲ್ಲಿ ಇದೊಂದು 'ಸಿದ್ಧಾಂತ" ಎಂಬುದನ್ನೇ ಪ್ರಧಾನವಾಗಿ ಅಧ್ಯಕ್ಷ ಶ್ರೀ ಮಗುದುಂ ಅವರು ಪ್ರತಿಪಾದಿಸುತ್ತಾರೆ.

ಯುವಜನರು ರಾಷ್ಟ್ರದ ಅತುಳ ಸಂಪತ್ತು ಸಂಕುಚಿತ ಮನೋಭಾವದ 'ಜಾತಿ ಪದ್ಧತಿಗೆ ದೃಷ್ಟಿ ಕೊಡುವ ಅನಿಷ್ಟ ಪರಂಪರೆಗೆ ಇತಿಶ್ರೀ ಹಾಡಿ ಯುವಜನರ ಭವಿಷ್ಯ ಉಜ್ವಲವಾಗಲು ವಿಶಾಲ ದೃಷ್ಟಿಕೋನದ ಶಿಕ್ಷಣ ವ್ಯವಸ್ಥೆ ಅತ್ಯಗತ್ಯ. ನಾವೆಲ್ಲಾ ಒಂದೇ ಜನ, ಒಂದೇ ಮತ, ಒಂದೇ ಕುಲ ನಾವು ಮನುಜರು ಎಂಬ ಅಡಿಗರವಾಣಿಯಂತೆ ಮನುಜಮತ ವಿಶ್ವಪಥ ಎಂಬ ಕವಿ ಕುವೆಂಪುರವರ ಘೋಷಣೆಯನ್ವಯವೂ ವೀರಶೈವ ಧರ್ಮ ವಿಶ್ವಧರ್ಮವಾಗಬೇಕು. ಈ ಕಾರಣದಿಂದಾಗಿ ಹಳೆಯ ಮೂಢನಂಬಿಕೆಗಳು ಕಂದಾಚಾರ ಕಟ್ಟಳೆಗಳ ಕಟ್ಟೆಯನ್ನು ಒಡೆದು, ಸಮಸ್ಯೆಗಳನ್ನು ವೈಜ್ಞಾನಿಕವಾಗಿ ಚಿಂತಿಸಿ ಇಂದಿನ ಪರಿಸರಕ್ಕೆ ಅನುಗುಣವಾಗಿ ನೂತನ



ಸಮಾಜವನ್ನು ನಿರ್ಮಿಸಲು ಯುವಜನರನ್ನು ಸನ್ನದ್ಧರನ್ನಾಗಿ ಮಾಡಬೇಕೆಂಬುದೇ ಶ್ರೀ ಮಗುದುಂ ಅವರ ಸಿದ್ಧಾಂತ.

ಧರ್ಮಗುರುಗಳೇ ಸಮಾಜದ ನೈಜ ಪ್ರತಿನಿಧಿಗಳು. ಸಮಾಜದ ಸಂಘಟನೆಯ ಸಂಜೀವಿನಿ. ಸಮಾಜದ ಸರ್ವತೋಮುಖವಾದ ಅಭಿವೃದ್ಧಿಗಾಗಿ ಸಂಘಟನಾ ಕಾರ್ಯದಲ್ಲಿ ಧರ್ಮಗುರುಗಳ ಪಾತ್ರ ಇಂದು ಗುರುತರವಾಗಿದೆ. ಧರ್ಮಪೀಠಗಳೇ ಇಂದಿನ ಎಲ್ಲ ವಿಧವಾದ ಧಾರ್ಮಿಕ ಶಿಕ್ಷಣ, ಸಾಂಸ್ಕೃತಿಕ ಸಾಮಾಜಿಕ ಜಾಗೃತಿಯ ಕೇಂದ್ರಗಳು. ಸಮಾಜದ ಸಕಲ ಶ್ರೇಯಸ್ಸಿಗೆ ಸಮಾಜವನ್ನು ಪ್ರೇರೇಪಿಸಲು ಧರ್ಮಗುರುಗಳು ತಮ್ಮಲ್ಲಿರುವ ಭೇಧ ಭಾವನೆಗಳನ್ನು ಬದಿಗೊತ್ತಿ ಒಗ್ಗೂಡಬೇಕು. ಮೂರಾಬಟ್ಟೆಯಾಗಿರುವ ವೀರಶೈವರನ್ನು ಒಗ್ಗೂಡಿಸಲು ಸಾಮಾಜಿಕ ಸಮತೆಯನ್ನು ಸಾಧಿಸಲು ಧಾರ್ಮಿಕ ಕೇಂದ್ರಗಳು ಸಾಮಾಜಿಕ ಬದುಕಿಗೆ ಧರ್ಮ ದೀಕ್ಷೆಕೊಟ್ಟು, ಜಾತಿ, ಉಪಜಾತಿ, ಪಂಗಡ, ಒಳಪಂಗಡಗಳನ್ನು ಮೂಲೋಚ್ಚಾಟನೆ ಮಾಡಲು ಪ್ರಪ್ರಥಮವಾಗಿ ಎಲ್ಲ ಮಠಾಧೀಶರರ ಮನವೊಲಿಸುವ ಕಾರ್ಯ ಮೊದಲಾಗಬೇಕೆಂಬ ಅಭಿಲಾಷೆ ಶ್ರೀಯುತ ಮಗುದುಂ ಅವರದು.

---

**ಅಖಿಲ ಭಾರತ ವೀರಶೈವ ಮಹಾಸಭೆ ಅಧಿವೇಶನ ದಿನಾಂಕ 24, 25 ಏಪ್ರಿಲ್ 83, ಸರ್ವರಿಗೆ ಸ್ವಾಗತ.**

LICENCED TO POST WITHOUT PRE PAYMENT LICENCE NO. 3
SIDDAGANGA Monthly Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,